ಪ್ರಚಾರ ಪುಸ್ತಕ ಮಾಲೆ

241

# ಕನ್ನಡ ಸಾಹಿತ್ಯದ ಭಾಗವತ ಕವಿಗಳು

ಎ. ಎಸ್. ವೇಣುಗೋಪಾಲರಾವ್



ಪ್ರಚಾರಪುಸ್ತಕಮಾಲೆ—೨೪೧

# ಕನ್ನಡ ಸಾಹಿತ್ಯದ ಭಾಗವತ ಕವಿಗಳು

ಡಾ. ಎ. ಎಸ್. ವೇಣುಗೋಪಾಲರಾವ್




೧೯೬೩

ಮೊದಲನೆಯ ಮುದ್ರಣ : ೧೯೭೩

೫,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಪ್ರಕಾಶಕರು

ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು–೬

ಮುದ್ರಕರು

ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ

ಮಾನಸಗಂಗೋತ್ರಿ, ಮೈಸೂರು–೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ "ಸೆನೆಟ್" ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು,

ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವ ವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ ; ಜನರಲ್ಲಿ ಜ್ಞಾನೋ ದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡು ವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಇನ್ನೂರನಲವತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಎ. ಎಸ್. ವೇಣುಗೋಪಾಲರಾವ್ ಅವರ 'ಕನ್ನಡ ಸಾಹಿತ್ಯದ ಭಾಗವತ ಕವಿಗಳು' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು

**ಕೆ. ಎಸ್. ಹೆಗ್ಡೆ**

ಕುಲಪತಿ

# ಅರಿಕೆ

ಚಿಕ್ಕಮಗಳೂರು ಜಿಲ್ಲೆಯ ದೇವನೂರಿನಲ್ಲಿ (೨೮-೮-೧೯೮೧) ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ನಾನು ಮಾಡಿದ ಉಪನ್ಯಾಸದ ವಿಸ್ತೃತ ರೂಪವೇ ಈ ಪುಸ್ತಿಕೆ. ನನ್ನ ಮನೋಧರ್ಮಕ್ಕೆ ಪ್ರಿಯವಾದ ಈ ವಿಷಯದಲ್ಲಿ ಉಪನ್ಯಾಸ ನೀಡಲು ನನ್ನನ್ನು ನಿಯೋಜಿಸಿದ ಮೈಸೂರು ವಿಶ್ವವಿದ್ಯಾನಿಲಯ – ಪ್ರಸಾರಾಂಗದ ನಿರ್ದೇಶಕರಾಗಿದ್ದ ಡಾ. ಪ್ರಭುಶಂಕರ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲಬೇಕು. ಹಾಗೆಯೇ ಉಪನ್ಯಾಸ ಕಾರ್ಯಕ್ರಮದ ಎಲ್ಲ ಸಿದ್ಧತೆಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ ದೇವನೂರು ಶ್ರೀ ಲಕ್ಷ್ಮೀಶ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಶ್ರೀ. ಕೆ. ಜಿ. ರುದ್ರಪ್ಪನವರಿಗೂ, ಅವರ ಸಹೋದ್ಯೋಗಿಗಳಿಗೂ, ತುಂಬ ಆಸಕ್ತಿಯಿಂದ ಉಪನ್ಯಾಸವನ್ನು ಕೇಳಿದ ಸಹೃದಯ ಶ್ರೋತೃಗಳಿಗೂ ನನ್ನ ನಮನ.

ಎ. ಎಸ್. ವೇಣುಗೋಪಾಲರಾವ್

# ಪರಿವಿಡಿ

ಪ್ರಹ್ಲಾದ ನಾರದ ಪರಾಶರ ಪುಂಡಲೀಕ
ವ್ಯಾಸಾಂಬರೀಶ ಶುಕಶೌನಕ ಭೀಷ್ಮದಾಲ್ಭ್ಯಾನ್
ರುಕ್ಮಾಂಗದಾರ್ಜುನ ವಿಭೀಷಣಾದೀನ್
ಧನ್ಯಾನ್ ಇಮಾನ್ ಪರಮ ಭಾಗವತಾನ್ ಸ್ಮರಾಮಿ.
(ಭಾಗವತ)

## ಭಾಗವತ–ಭಾಗವತ ಕವಿ

ಮೇಲಿನ ಶ್ಲೋಕ ಸಾಹಿತ್ಯದಲ್ಲಿ ನಮಗೆ ಪ್ರಸಕ್ತವಾದದ್ದು "ಭಾಗವತ" ಎಂಬ ಮಾತು. ಪ್ರಹ್ಲಾದ, ನಾರದ ಮೊದಲಾದ ಭಕ್ತ ಶ್ರೇಷ್ಠರನ್ನು ಈ ಶ್ಲೋಕದಲ್ಲಿ ಭಾಗವತರು ಎಂದು ಕರೆಯಲಾಗಿದೆ. ಅವರು ಭಗವಂತನಿಗೆ ಪ್ರಿಯರಾದವರು. ಈ ಪುಣ್ಯಶ್ಲೋಕರ ಕಥೆಗಳನ್ನು ಒಳಗೊಂಡ ಹೃದಯಂಗಮ ಪುರಾಣ ಕಾವ್ಯಕ್ಕೆ ಭಾಗವತ ಎಂದೇ ಹೆಸರು. ಭಗವಾನ್ ಕೃಷ್ಣನನ್ನು ಚಾಟು ವಿಠಲನಾಥ ಕವಿ, "ಭಾಗವತ ಜನ ಲೋಲುಪ" ಎಂದೇ ಕರೆದಿದ್ದಾನೆ. ಈ ಎಲ್ಲ ಮಾತುಗಳಲ್ಲಿ "ಭಾಗವತ" ಎಂದರೆ ಭಗವಂತನ ಭಕ್ತ ಎಂಬ ಅರ್ಥವೇ ಪ್ರಚಲಿತವಾಗಿರುವಂತೆ ತೋರುತ್ತದೆ.

ಉದಾಹರಿಸಿರುವ ಶ್ಲೋಕದಲ್ಲಿ ಕೀರ್ತಿತರಾಗಿರುವವರೆಲ್ಲರೂ ವಿಷ್ಣುವಿನ ಭಕ್ತರು ಎಂಬುದು ಗಮನಾರ್ಹ. ಭಾಗವತ ಕಾವ್ಯವೂ ವೈಷ್ಣವ ಕಾವ್ಯವೇ. ಆದುದರಿಂದ ದೈವಭಕ್ತರೆಲ್ಲರನ್ನೂ ಭಾಗವತರು ಎನ್ನಬಹುದಾದರೂ ಸಾಮಾನ್ಯವಾಗಿ ಭಾಗವತ ಎಂಬ ಮಾತು ವೈಷ್ಣವ ಭಕ್ತಿ ಪಂಥದಲ್ಲಿಯೇ ಬಳಸಿದ ಪಾರಿಭಾಷಿಕ ಶಬ್ದವಿದ್ದಂತೆ ತೋರುತ್ತದೆ.

ರಾಮಾಯಣ ಕಾವ್ಯವನ್ನು ಬರೆದ ಕವಿಯನ್ನು ರಾಮಾಯಣ ಕವಿ, ಅಂತೆಯೇ ಭಾರತ ಕವಿ, ಇತ್ಯಾದಿಯಾಗಿ

ಸಂಬೋಧಿಸುವುದು ರೂಢಿಯಲ್ಲಿದೆ. ಭಾಗವತ ಕಾವ್ಯವನ್ನು ಬರೆದ ಕವಿಯನ್ನು ಭಾಗವತ ಕವಿ ಎನ್ನುವುದು ಒಂದು ಅರ್ಥದಲ್ಲಿ ಸರಿಯೇ.

ಆದರೆ ಜೈನಧರ್ಮದ ಕವಿಯನ್ನು ಜೈನಕವಿ, ವೀರಶೈವ ಧರ್ಮದ ಕವಿಯನ್ನು ವೀರಶೈವ ಕವಿ ಎನ್ನುವಾಗ ಪ್ರಸಕ್ತವಾದ ಅರ್ಥವೇನು? ಜೈನಧರ್ಮವನ್ನು ಅವಲಂಬಿಸಿದ ಕವಿ, ವೀರಶೈವ ಧರ್ಮದ ಕವಿ ಎಂದಲ್ಲವೆ? ಈ ಅರ್ಥದಲ್ಲಿ ಭಾಗವತ ಧರ್ಮವನ್ನು ಅವಲಂಬಿಸಿದ ಕವಿಯನ್ನು ಭಾಗವತ ಕವಿ ಎನ್ನಬಹುದು. ಪ್ರಕೃತ ಪುಸ್ತಿಕೆಯಲ್ಲಿ ನಮಗೆ ಪ್ರಸಕ್ತವಾದದ್ದು ಮುಖ್ಯವಾಗಿ ಈ ಅರ್ಥವೇ. ಕನ್ನಡ ಸಾಹಿತ್ಯದಲ್ಲಿ ಕೃತಿರಚನೆ ಮಾಡಿದ ಭಾಗವತಧರ್ಮದ ಕವಿಗಳನ್ನು, ಅವರ ಜೀವನ ದರ್ಶನವನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ. ಕನ್ನಡ ಸಾಹಿತ್ಯಕ ಸಂದರ್ಭ ದಲ್ಲಿ ಒಂದು ಐತಿಹಾಸಿಕ ಅಗತ್ಯವಾಗಿ ಬಂದ, ಹಾಗೂ ಪ್ರಭಾವ ಶಾಲೀ ಪರಂಪರೆಯಾಗಿ ಬೆಳೆದು ಬಂದ, ಈ ಭಾಗವತ ಕಾವ್ಯ ಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ಈ ಕವಿಗಳು ಭಕ್ತ ಕವಿಗಳೂ, ವೈಷ್ಣವ ಭಕ್ತಿ ಪಂಥವನ್ನು ಮನಸಾ ಸ್ವೀಕರಿಸಿ ದವರೂ ಆಗಿದ್ದಾರೆ ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೆ "ಭಾಗವತ ಕವಿ" ಎಂಬ ಮಾತು, ಈ ಹಿಂದೆ ಸೂಚಿಸಿದ ಸಾಮಾನ್ಯ ಹಾಗೂ ವಿಶೇಷ ಅರ್ಥಗಳೆಲ್ಲವನ್ನೂ ಒಳಗೊಳ್ಳು ತ್ತದೆ.

## ಭಾಗವತ ಧರ್ಮ

ಹಾಗಾದರೆ ಭಾಗವತ ಧರ್ಮ ಎಂದರೇನು? ಇದು ಮಹಾ ಭಾರತದ ಕಾಲದಲ್ಲಿಯೇ ಪ್ರಖ್ಯಾತವಾಗಿದ್ದ ಒಂದು ಪಂಥ. ಭಾಗವತ ಧರ್ಮದ ಮೂಲವನ್ನು ಭಾರತದ ನಾರಾಯಣೀ

ಯೋಪಾಖ್ಯಾನದಲ್ಲಿಯೇ ಗುರುತಿಸಬಹುದು ಎಂದು ಬಾಲ ಗಂಗಾಧರ ತಿಲಕರ ಅಭಿಪ್ರಾಯ. 'ಗೀತೆಯಲ್ಲಿ ಭಾಗವತ ಧರ್ಮ ವನ್ನೆಲ್ಲ ಹೇಳಿರುತ್ತದೆ' ಎಂಬ ಶಾಂತಿಪರ್ವದ ಮಾತನ್ನೂ ತಿಲಕರು ತಮ್ಮ ಗೀತಾರಹಸ್ಯದಲ್ಲಿ ನೆನಪಿಸುತ್ತಾರೆ.[1]

ಭಾಗವತ ಧರ್ಮ ಉಪನಿಷತ್ಕಾಲದ ಅನಂತರ ಬೌದ್ಧ ಧರ್ಮಕ್ಕೆ ಮೊದಲು ಹುಟ್ಟಿದ ಧರ್ಮ. ಮಹಾಭಾರತದ ಶಾಂತಿ ಪರ್ವ, ಶಾಂಡಿಲ್ಯಸೂತ್ರ, ಭಾಗವತ ಪುರಾಣ, ನಾರದ ಸೂತ್ರ, ಇವು ಭಾಗವತ ಧರ್ಮವನ್ನು ಪ್ರತಿಪಾದಿಸುವ ಗ್ರಂಥಗಳು-ಆಧಾರಗಳು. ಪರಬ್ರಹ್ಮನ ಅವತಾರವಾದ ನರನಾರಾಯಣ ಋಷಿಗಳು ಭಾಗವತ ಧರ್ಮದ ಪ್ರವರ್ತಕರು ಎಂದು ಶಾಂತಿ ಪರ್ವದ ಹೇಳಿಕೆ. ಈ ಸಂಪ್ರದಾಯದಲ್ಲಿ ಶ್ವೇತದ್ವೀಪ ಭಗವಂತನ ಆವಾಸಸ್ಥಾನ. ಅದು ಕ್ಷೀರಸಮುದ್ರದ ಮಧ್ಯದಲ್ಲಿದೆ. ಈ ಭಗವಂತನೇ ವಾಸುದೇವ. ಜೀವನು ಸಂಕರ್ಷಣ, ಮನಸ್ಸು ಪ್ರದ್ಯುಮ್ನ, ಅಹಂಕಾರವೇ ಅನಿರುದ್ಧ, ಇತ್ಯಾದಿ. ಭಾಗವತ ಧರ್ಮಕ್ಕೆ ಸಾತ್ವತಧರ್ಮ ಎಂದೂ ಹೆಸರುಂಟು. ಇದು ಬಹುಶಃ ಯಾದವ ಕುಲದಲ್ಲಿ ಪ್ರಸಿದ್ಧವಾಗಿರಬೇಕು. ಯಾದವ ಕುಲ ನಾಯಕ ಕೃಷ್ಣ-ವಾಸುದೇವ-ನಿಂದ ಬೋಧಿಸಿ ಆಚರಿಸಲ್ಪಟ್ಟ ಈ ವಿಷ್ಣುಧರ್ಮದಲ್ಲಿ ಮುಂದೆ ಕೃಷ್ಣನನ್ನೇ ವಿಷ್ಣು ಪರಬ್ರಹ್ಮ ಎಂದು ಭಾವಿಸಿದರೆಂದು ತೋರುತ್ತದೆ. ಶಾಂತಿ ಪರ್ವದಲ್ಲಿ ವಾಸು ದೇವನನ್ನು ಚಕ್ಷುಗಳಿಗೆ ಅಗೋಚರ, ಧ್ಯಾನಮಾತ್ರ ಗೋಚರ ಎಂಬಂತೆ ವರ್ಣಿಸಲಾಗಿದೆ. ಪಂಚಮಹಾಭೂತಗಳು ಆತನ ಶರೀರ, ಆತ ಲೋಕಸಾಕ್ಷಿ, ಕ್ಷೇತ್ರಜ್ಞ, ಚರಾಚರ ವಿಶ್ವ ಆತನಲ್ಲಿ ಸಂಭವಿಸಿ ಆತನಲ್ಲಿಯೇ ಲಯವಾಗುತ್ತದೆ ಎಂದು ವೈಭವಿಸ ಲಾಗಿದೆ. ಹಂಸ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ,

ವಾಮನ, ಪರಶುರಾಮ, ದಾಶರಥಿರಾಮ, ಸಾತ್ವತ ಹಾಗೂ ಕಲ್ಕಿ ಇವು ಅವನ ಹತ್ತು ಅವತಾರಗಳು. ಎಂದರೆ ವಾಸುದೇವ ಕೃಷ್ಣನೂ ಲೋಕೋದ್ಧಾರಕ್ಕಾಗಿ ಅವತಾರವೆತ್ತಿ ಮಾನುಷ ರೂಪದಲ್ಲಿ ವ್ಯವಹರಿಸಿದವನು, ಲೋಕ ಕಲ್ಯಾಣವನ್ನು ಸಾಧಿಸಿದವನು, ಎಂದು ಭಾಗವತ ಧರ್ಮದ ಶ್ರದ್ಧೆ.

ಸಂನ್ಯಾಸ, ಭಾಗವತ ಧರ್ಮದ ಉಪದೇಶವಲ್ಲ. ಬದಲಾಗಿ ನಿಷ್ಕಾಮಪರ ಪ್ರವೃತ್ತಿಮಾರ್ಗವನ್ನು ಅದು ಎತ್ತಿಹಿಡಿಯುತ್ತದೆ. ನಿಷ್ಕಾಮ ಭಕ್ತಿಯನ್ನು ಪ್ರತಿಪಾದಿಸುತ್ತದೆ.— ಪ್ರವೃತ್ತೀ ಲಕ್ಷಣಶ್ಚೈವ ಧರ್ಮೋನಾರಾಯಣಾತ್ಮಕ:[2]—ಎಂಬುದು ಈ ಧರ್ಮದ ಪ್ರಮುಖ ಸೂತ್ರ. “ನೈಷ್ಕರ್ಮ ಧರ್ಮದಲ್ಲಿ ಭಕ್ತಿಗೆ ಸಾಕಷ್ಟು ಪ್ರಾಶಸ್ತ್ಯ ಕೊಡಲಿಲ್ಲವಾದಕಾರಣ ಭಾಗವತ ಪುರಾಣವನ್ನು ಹೇಳಬೇಕಾಯಿತು.[3] ಎಂಬ ಮಾತು ಗಮನಾರ್ಹ. ಮೂರು ವೇದಗಳು, ಸಾಂಖ್ಯ, ಯೋಗ ಇವುಗಳ ಸಮನ್ವಯ ಯತ್ನವನ್ನು ಭಾಗವತ ಧರ್ಮ ಮಾಡಿದುದರಿಂದ ಅದಕ್ಕೆ ಪಾಂಚರಾತ್ರ ಎಂಬ ಹೆಸರೂ ಉಂಟು. ರಾಮಾನುಜರ ಪ್ರಪತ್ತಿಮಾರ್ಗ ಪ್ರತಿಪಾದನೆಯ ಕಾಲಕ್ಕೆ ಅದು “ ಸರ್ವ ಶರಣಾಗತಿ ತತ್ತ್ವ ”ದ ಹಂತಕ್ಕೆ ಬಂದು ಮುಟ್ಟಿತು.

ವಾಸುದೇವ ಕೃಷ್ಣನೇ ಉಪಾಸ್ಯ ದೈವವಾದುದರಿಂದ ಭಾಗವತ ಧರ್ಮವನ್ನು ಏಕಾಂತಧರ್ಮ ಎಂದೇ ಕರೆಯಲಾಗಿದೆ. ಆದರೆ ಈ ಕಾರಣದಿಂದ ಸಮಾಜದಲ್ಲಿ ದೈವದ ಹೆಸರಿನಲ್ಲಿ ಕಲಹಗಳುಂಟಾಗದಂತೆ, “ ಸರ್ವದೇವ ನಮಸ್ಕಾರ: ಕೇಶವಂ ಪ್ರತಿಗಚ್ಛತಿ ” ಎಂಬ ನಿರ್ಣಯಕ್ಕೆ ಬಂದು ಅನ್ಯದೈವಗಳನ್ನೂ ಗೌರವ–ಭಕ್ತಿಗಳಿಂದ ಉಪಾಸಿಸಲಾಗುತ್ತದೆ. ಇದು ಭಾಗವತ ಧರ್ಮದ ಆರೋಗ್ಯಕರ ನಿಲವು. “ ರುದ್ರನು ಬೇರೆ, ಭಗವಂತನು

ಬೇರೆ ಎಂದು ತಿಳಿಯಬಾರದೆಂದು ಭಗವದ್ಗೀತೆಯೂ ನಾರಾಯಣೀಯ ಉಪಾಖ್ಯಾನವೂ ಸ್ಪಷ್ಟಪಡಿಸುತ್ತವೆ."[4]

ಭಾಗವತ ಧರ್ಮ ಭಕ್ತಿಯನ್ನೇ ಮುಕ್ತಿಯ ಸಾಧನವಾಗಿ ಸ್ವೀಕರಿಸಿತು. ಭಗವಂತನಲ್ಲಿ ಗಾಢವಾದ ಅನುರಕ್ತಿಯೇ ಭಕ್ತಿ. ಆದರೆ ಭಗವಂತನ ಜ್ಞಾನದ ಅನಂತರವೂ ಭಕ್ತನು ಜಗತ್ತಿನ ಧಾರಣಪೋಷಣಗಳಿಗೆ ಕರ್ಮವನ್ನು ಮಾಡುತ್ತಲೇ ಇರಬೇಕು ಎಂಬುದು ಭಾಗವತ ಧರ್ಮದ ಉಪದೇಶ. ಇದರಿಂದ ಜಗತ್ತಿನ ಸಮಾಜದ ವ್ಯವಸ್ಥೆ ಉಳಿದು, ಬೆಳೆಯುತ್ತದೆ. ನಿಷ್ಕ್ರಿಯತೆ ಉಂಟಾಗುವುದಿಲ್ಲ ಎಂಬುದು ಗಮನಾರ್ಹ. ಶುದ್ಧ ನಿವೃತ್ತಿಗಿಂತ ಭಕ್ತಿಯುಕ್ತ ಕರ್ಮವನ್ನು ಭಾಗವತಧರ್ಮ ಎತ್ತಿ ಹಿಡಿಯುತ್ತದೆ. ನರನಾರಾಯಣ ಋಷಿಗಳೂ ಇಂತಹ ಕರ್ಮವನ್ನು ಮಾಡುವವರೇ. ಜಗತ್ತು ಭಗವಂತನ ಲೀಲಾವಿನೋದವೆಂದೂ ಅದರಲ್ಲಿ ತಮತಮಗೆ ವಿಧಿಸಿದ ಪಾತ್ರವನ್ನು ಆಲಸ್ಯ—ಅಸಡ್ಡೆಗಳಿಲ್ಲದೆ ಮಾಡಿ ಮುಗಿಸುವುದರಿಂದಲೇ ಭಗವಂತನು ಪ್ರೀತನಾಗುತ್ತಾನೆಂದೂ ಈ ಧರ್ಮ ನಂಬುತ್ತದೆ. ಭಾರತದ ಕರ್ಣನ ಪಾತ್ರವೇ ಈ ಮಾತಿಗೆ ನಿದರ್ಶನ. ಭಗವಂತನೇ ಒಡ್ಡಿದ ಪ್ರಲೋಭನೆಗೆ ಬಲಿಯಾಗದೆ ಬದುಕಿನ ಕಡೆಯ ಉಸಿರಿನವರೆಗೂ ಸ್ವಾಮಿಋಣವನ್ನು ತೀರಿಸಿ ಕೃತಾರ್ಥನಾದ ಅವನಿಗೆ "ಪರಮ ಕರುಣಾಸಿಂಧು ಕರ್ಣಂಗೆ ನಿಜಮೂರ್ತಿಯನ್ನು ತೋರಿದನು. ಮುಕುತಿಯ ಪದದಲಿ ನಿಯಮಿಸಿದನು."[5] ಎಂಬ ಕವಿವಾಣಿಯನ್ನು ಗಮನಿಸಬೇಕು. ಸಕಲ ಕರ್ಮಗಳನ್ನೂ ಭಗವಂತನ ಸೇವೆಯೆಂದು ತಿಳಿದು ಕಾಯೇನ ವಾಚಾ ಮನಸಾ ನೆರವೇರಿಸಿದರೆ ಅದರ ಫಲವನ್ನು ಭಗವಂತನಿಗೇ ಸಮರ್ಪಿಸಿದರೆ, ಜೀವನು ಪರಮ ಭಾಗವತನಾಗುತ್ತಾನೆ. ಅಂಥವನ ದೃಷ್ಟಿಯಲ್ಲಿ ಇಡಿಯ

ಜಗತ್ತು ಪರಮಾತ್ಮನ ವಿನೋದರಂಗ. ಮಣ್ಣಿನ ಕಣ ಕಣದಲ್ಲಿ ಆತ ಭಗವತ್ಕೃಪೆಯನ್ನು ಕಾಣುತ್ತಾನೆ. ಸುತ್ತ ಸುಳಿವ ಗಾಳಿಯಲ್ಲಿ ಅವನ ಉಸಿರನ್ನೇ ಕೇಳುತ್ತಾನೆ. ಎಂದರೆ ಈಶಾವಾಸ್ಯ ತತ್ತ್ವ ಅವನಿಗೆ ನಿತ್ಯದ ಅನುಭವವಾಗುತ್ತದೆ. ಆತ ಸರ್ವಭೂತ ಹಿತರತ, ಸಮಚಿತ್ತ, ನಿತ್ಯತೃಪ್ತ. ಅವನ ಮಾತೆಂದರೆ ದೇವನ ಗುಣಗಾನ. ಅವನ ನೆನಹು ಭಗವಂತನದು, ಅವನ ಕನಸು ಭಗವಂತನದು. ಅವನ ಸಕಲ ಕರ್ಮಗಳೂ ಭಗವದುಪಾಸನೆ.

ಹೀಗೆ ಸರ್ವಾರ್ಪಣ ಭಾವ, ಶುದ್ಧ ಭಕ್ತಿಗಳು–ಸರ್ವದೈವ ಸಮಭಾವ–ಭಾಗವತ ಧರ್ಮದ ಎರಡು ಕಣ್ಣುಗಳಿದ್ದಂತೆ. ಈ ರೀತಿಯಲ್ಲಿ ಭಗವದಾರಾಧನೆಯೇ ಭಾಗವತನ ಬದುಕು.

ಭಾಗವತ ಧರ್ಮದ ಈ ಹೃದಯಂಗಮ ತತ್ತ್ವವನ್ನು ತಮ್ಮ ರಮಣೀಯ ಕಾವ್ಯದ ಹೃದಯವಾಗಿ ಮಾಡಿದವರೇ ಭಾಗವತ ಕವಿಗಳು. ಪ್ರಕೃತ, ಕನ್ನಡ ಸಾಹಿತ್ಯದ ಭಾಗವತ ಕವಿಗಳನ್ನು ಕುರಿತು ಪರಿಶೀಲಿಸಬಹುದು.

## ಕರ್ನಾಟಕದ ಹದವಾದ ನೆಲ

ಕನ್ನಡ ಸಾಹಿತ್ಯದಲ್ಲಿ ಮಾತ್ರವೇ ಭಾಗವತ ಧರ್ಮದ ಕಾವ್ಯ ಒಂದು ಪರಂಪರೆಯಾಗಿ ಬೆಳೆದು ಬಂದಿತು ಎಂಬುದು ಗಮನಾರ್ಹ. ತಮಿಳುನಾಡು ಹಾಗೂ ಉತ್ತರ ಭಾರತದಲ್ಲಿ ಭಕ್ತಿಸಾಹಿತ್ಯ ಬೆಳೆದು ಬಂದಿರುವುದು ನಿಜ. ಶೈವ ವೈಷ್ಣವ ಭಕ್ತಿಗಳ ಎರಡು ಪ್ರವಾಹವೂ ಅಲ್ಲಿ ಪೆರಿಯಪುರಾಣ, ತುಲಸೀ ರಾಮಾಯಣ, ಚೈತನ್ಯ ಕಾವ್ಯ ಮುಂತಾದ ಸಂದರ್ಭದಲ್ಲಿ ಕಾಣುತ್ತದೆ. ಆದರೆ ಬಹುಮಟ್ಟಿಗೆ ಆದು ಭಾವುಕ ಭಕ್ತಿವಾಹಿನಿ.

ಸಿದ್ಧಾಂತದ ಬಲವಾದ ಬುನಾದಿ, ಭಾಗವತ ಧರ್ಮಕ್ಕೆ ಒದಗಿದಂತೆ ಈ ಕೃತಿಗಳಲ್ಲಿ ತೋರುವುದಿಲ್ಲ. ಅಲ್ಲದೆ ಈ ಸಾಹಿತ್ಯ ಕನ್ನಡದಲ್ಲಿ ಯಂತೆ ಒಂದು ಖಚಿತ ಪರಂಪರೆಯನ್ನು ಸೃಷ್ಟಿಸಲಿಲ್ಲ. ಇದಕ್ಕೆ ಕಾರಣವೂ ಉಂಟು.

13ನೇ ಶತಮಾನದ ರುದ್ರಭಟ್ಟನಲ್ಲಿ ಭಾಗವತ ಧರ್ಮದ ಮೊದಲ ಕನ್ನಡ ಕೃತಿ ವ್ಮೈದೋರಿತು. ಅದು ಜಗನ್ನಾಥ ವಿಜಯ. ಆ ವೇಳೆಗೆ ಭಾಗವತ ಧರ್ಮ ಪ್ರಸಾರಕ್ಕೆ ಕರ್ನಾಟಕದ ನೆಲ ಹದವಾಗಿತ್ತು. ಶ್ರೀ ರಾಮಾನುಜರು ಚೋಳನಾಡಿನಿಂದ ಕರ್ನಾಟಕಕ್ಕೆ ಬಂದುದು ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ (ಕ್ರಿ.ಶ. 1110–52) ಚೋಳರ ಕಿರುಕುಳದಿಂದ ಅವರು ಆಶ್ರಯ ಬೇಡಿ ಇಲ್ಲಿಗೆ ಬಂದರೆಂದು ಸಂಪ್ರದಾಯ ನಂಬುತ್ತದೆ. ಆ ವೇಳೆಗೆ ಇಲ್ಲಿ ಸ್ಥಿರವಾಗಿ ಬೇರೂರಿದ್ದ ಜೈನಧರ್ಮವನ್ನು ವಾದ ದಲ್ಲಿ ಸೋಲಿಸಿ ಮತಸ್ಥಾಪನೆ ಮಾಡುವ ಉದ್ದೇಶವೂ ಆಚಾರ್ಯರಿಗೆ ಇರಬಹುದು. ಧರ್ಮ ಸಾಮರಸ್ಯದ ಬೀಡಾಗಿದ್ದ ಹೊಯ್ಸಳ ನಾಡು ರಾಮಾನುಜರಿಗೆ ಆಶ್ರಯ–ಅವಕಾಶ–ಪ್ರೋತ್ಸಾಹಗಳನ್ನಿತ್ತುದು ಐತಿಹಾಸಿಕ ಸಂಗತಿ. ಅದರ ವಿವರ ಗಳು ನಮಗೆ ಪ್ರಸ್ತುತವಲ್ಲ. ಈ ರಾಮಾನುಜ ಧರ್ಮ ಭಕ್ತಿ–ಪ್ರಪತ್ತಿ ಸಿದ್ಧಾಂತಗಳ ಆಧಾರದ ಮೇಲೆ ನಿಂತದ್ದು ಎಂಬುದು ಮುಖ್ಯವಾದ ಮಾತು. "ಶೇಮುಶೀ ಭಕ್ತಿರೂಪಾ"– ಜ್ಞಾನವೆಲ್ಲ ಭಕ್ತಿಯಾಗಿ ಶ್ರೀನಿವಾಸನ ಅಡಿಯೆಡೆಗೆ ಪ್ರವಹಿಸಲಿ ಎಂಬ ರಾಮಾನುಜ ದರ್ಶನ, ಭಾಗವತ ಧರ್ಮಕ್ಕೆ ತೀರ ಹತ್ತಿರ ವಾದದ್ದು.[6]

ಹನ್ನೆರಡನೆ ಶತಮಾನದಲ್ಲಿ ಶ್ರೀ ಬಸವೇಶ್ವರರ ಪ್ರಚಂಡ ನೇತೃತ್ವದಲ್ಲಿ ವೀರಶೈವ ಧರ್ಮ ಉಗಮವಾಯಿತಷ್ಟೆ! ಈ

ಮತದ ಬೇರೂ ಭಕ್ತಿಯ ಬೀಜದಿಂದಲೇ ಅಂಕುರಿಸಿದುದು. ಷಟ್ಸ್ಥಲಸಿದ್ಧಾಂತದ ಮೊದಲ ಮೆಟ್ಟಿಲು ಭಕ್ತಸ್ಥಲ. ಭಕ್ತಿ ಭಂಡಾರಿ ಬಸವಣ್ಣನವರು ಎಂದೇ ಬಸವೇಶ್ವರರ ಕೀರ್ತಿ. "ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ, ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವ"[7] ಎಂಬ ಅವರ ಸೂತ್ರಪ್ರಾಯವಾದ ಮಾತುಗಳನ್ನು ನೋಡಬೇಕು. ಶಿವನಲ್ಲಿ ಯಾವುದು ಶಕ್ತಿ ಯಾಗಿದೆಯೋ ಜೀವನಲ್ಲಿ ಅದೇ ಭಕ್ತಿಯಾಗಿ. ಸತತ ಸಹಚರಿ ಯಾಗಿ ಜೀವನನ್ನು ಉದ್ಧರಿಸುತ್ತದೆ. ಜೀವ–ಶಿವೈಕ್ಯವನ್ನು ಸಾಧಿಸಿ ಕೊಡುತ್ತದೆ ಎಂಬುದು ಸಿದ್ಧಾಂತ. ಹೀಗಾಗಿ, ವೀರಶೈವ ಧರ್ಮದ ಭಕ್ತಿ ತತ್ವವೂ ಭಾಗವತ ಧರ್ಮಕ್ಕೆ ಹೊರತಲ್ಲ. ಹಾಗೆಯೇ, ಬಸವಧರ್ಮದಂತೆ ಕರ್ನಾಟಕದಲ್ಲಿಯೇ ಹುಟ್ಟಿದ ಮಧ್ವಸಿದ್ಧಾಂತವೂ ಭಕ್ತಿಯ ತಳಹದಿಯ ಮೇಲೆ ನಿಂತದ್ದು. "ಮುಕ್ತಿರ್ನೈಜ ಸುಖಾನುಭೂತಿರಮಲಾ, ಭಕ್ತಿಶ್ಚ ತತ್ಸಾಧನಂ"[8] ಎಂಬ ಸೂತ್ರವನ್ನು ಗಮನಿಸಬೇಕು. ಹರಿದಾಸ ಸಾಹಿತ್ಯದಲ್ಲಿ ಅಂತರ್ಗತವಾದ ಈ ಸೂತ್ರ ಮಧ್ವಸಿದ್ಧಾಂತದ ಸುವರ್ಣ ಸೂತ್ರವೇ ಆಗಿದೆ. ಹೀಗೆ ಭಗವದ್ಭಕ್ತಿ–ಉಪಾಸನೆಗಳು, ತತ್ತ್ವವಾಗಿ ಈ ಮೂರೂ ಧರ್ಮಗಳ ತಳಹದಿಯಾಗಿದ್ದವು. ಇವುಗಳಲ್ಲಿ ಎರಡು ಕರ್ನಾಟಕದಲ್ಲಿಯೇ ಹುಟ್ಟಿ ಬೆಳೆದವು. ಈ ನಾಡಿನ ಅರಸರ ಪ್ರೋತ್ಸಾಹ ಪೋಷಣೆಯಿಂದ, ತಮಿಳು ನಾಡಿನ ರಾಮಾನುಜ ಧರ್ಮವೂ ಇಲ್ಲಿಯೇ ನೆಲೆನಿಂತಿತು. ವಿವರಗಳಲ್ಲಿ ಸಿದ್ಧಾಂತದ ಸೂಕ್ಷ್ಮತೆಗಳಲ್ಲಿ ಏನೇ ಭೇದವಿರಲಿ, ಭಗವದ್ಭಕ್ತಿ ಯನ್ನು ನಾಡಿನ ತುಂಬ ಹರಡಲು ಈ ಮೂರು ಧರ್ಮಗಳೂ ಕಾರಣವಾಗಿ ಭಕ್ತಿಧರ್ಮವೇ ಆದ ಭಾಗವತ ಧರ್ಮದ ಪ್ರಸಾರಕ್ಕೆ ಹದವಾದ ಕ್ಷೇತ್ರವನ್ನು ಕರ್ನಾಟಕದಲ್ಲಿ ಕಲ್ಪಿಸಿದವು. ಪ್ರಾಯಶಃ

ವಿಸ್ತಾರ ಹಾಗೂ ಆಳದಲ್ಲಿ ಇಂತಹ ಅಧ್ಯಾತ್ಮ ವ್ಯಾಪಕ ಕ್ಷೇತ್ರ ಭಾರತದಲ್ಲಿ ಬೇರೆಲ್ಲೂ ಇರಲಾರದು.

## ಐತಿಹಾಸಿಕ ಅಗತ್ಯ

ಹೀಗೆ ಶೈವ ವೈಷ್ಣವ ಪಂಥಗಳು ಭಕ್ತಿಯನ್ನು ಹದವಾಗಿ ಹರಡಿದುದು ನಿಜ. ಆದರೆ ಆ ಕಾಲದ ಧಾರ್ಮಿಕ ಸಾಮಾಜಿಕ ಸಂಘರ್ಷಗಳು ಜನಮನದಲ್ಲಿ ಶೈವ–ವೈಷ್ಣವ ಗೊಂದಲವನ್ನೂ ಉಂಟು ಮಾಡಿದಂತೆ ತೋರುತ್ತದೆ. ಮತೀಯ ಕಲಹಗಳೂ ಇಲ್ಲದೆ ಇರಲಿಲ್ಲ. ಅನೇಕ ಜೈನ ಬಸದಿಗಳು ಶಿವಾಲಯ ಗಳಾದುದೂ, ಎಷ್ಟೋ ಶಿವಾಲಯಗಳು ವೈಷ್ಣವರ ಗುಡಿಗಳಾ ದುದೂ ಐತಿಹಾಸಿಕ ಸತ್ಯ. ವಿವರಗಳು ಇಲ್ಲಿ ಪ್ರಸಕ್ತವಲ್ಲ. ಅನ್ಯದೈವ ನಿಂದನೆಗಾಗಿಯೇ ಕಾವ್ಯಗಳು ಹುಟ್ಟಿದುದೂ ಉಂಟು. ಬ್ರಹ್ಮಶಿವ, ವೃತ್ತವಿಲಾಸ ಇವರ ಕೃತಿಗಳಲ್ಲಿ ವೈದಿಕ ದೇವತೆ ಗಳನ್ನು ಕುರಿತ ವಾಚಾಮಗೋಚರ ಕುಹಕ, ಲೇವಡಿಗಳುಂಟು. ಜೈನಧರ್ಮವನ್ನು ಹತ್ತಿಕ್ಕಲು, ಸಂಘರ್ಷಗಳು ನಡೆದು, ಬಸದಿಗಳು ಶಿವಾಲಯಗಳಾದುದೂ ಸುಳ್ಳಲ್ಲ. ಅಂತಹ ಒಂದು ಸಂಘರ್ಷದ ಚಿತ್ರವನ್ನೇ ರಾಘವಾಂಕನ ಸೋಮನಾಥ ಚಾರಿತ್ರ ದಲ್ಲಿ ಕಾಣಬಹುದು. ಇದೇ ಕವಿಯ ವೀರೇಶ ಚರಿತೆ ವೈಷ್ಣವ ದೇವತೆಗಳನ್ನು ಹೀನೈಸುವ ಬೇರೊಂದು ಮಾದರಿ. ಅಲ್ಲಿ ಮತೀಯ ಕಲಹ, ಇಹಲೋಕದಿಂದ ಸ್ವರ್ಗಲೋಕಕ್ಕೆ ಅಡರಿದೆ– ಏರಿದೆ ಎಂಬುದಷ್ಟೇ ವ್ಯತ್ಯಾಸ. ಶಿವನ ಕೋಪದ ಅವತಾರವಾದ ವೀರಭದ್ರನು ವಿಷ್ಣುವನ್ನೂ ಅವನ ಹಿಂಬಾಲಕರನ್ನೂ ಅಟ್ಟಿ ಬೆದರಿಸುವ ಭವ್ಯ ಭಯಂಕರ ಚಿತ್ರವನ್ನು ಅಲ್ಲಿ ಕಾಣಬೇಕು. ಭಕ್ತಕವಿ ಹರಿಹರನೂ ಮನಸಿಜಾರಿಗೆ ಮಾತ್ರ ನಾಲಗೆಯನ್ನು

ಮಾರಿದವನು. ಅವನ ದೃಷ್ಟಿಯಲ್ಲಿ ಉಳಿದವೆಲ್ಲ "ಉಡುಕುಳಿ ದೈವಗಳು."[೨] ಏಕದೈವದಲ್ಲಿ ವೀರನಿಷ್ಠೆ ಸಾಧಕನ ದೃಷ್ಟಿಯಿಂದ ಎಷ್ಟೇ ಅಗತ್ಯವಿದ್ದರೂ ಅದರ ಇಂತಹ ವಿಪರೀತ ಪರಿಣಾಮ ಗಳನ್ನು ಅಲಕ್ಷಿಸುವಂತಿಲ್ಲ. ಶ್ರೀ ವೈಷ್ಣವರಲ್ಲಿ ಒಂದು ಸೂಕ್ತಿ ಯುಂಟಂತೆ. ಅದರ ಅರ್ಥ. "ಹುಲಿ ಬೆನ್ನಟ್ಟಿ ಬರುತ್ತಿದ್ದರೂ ಶಿವಾಲಯವನ್ನು ಹೊಗಬಾರದು" ಎಂದು! ಅಂತಹ ವೀರ ವೈಷ್ಣವ ನಿಷ್ಠೆ!

ವಿವಿಧ ಮತ-ಪಂಥಗಳು ಬೆಳೆಯುತ್ತಿರುವಾಗ, ಅನಿವಾರ್ಯ ವೆಂಬಂತೆ, ಬೆಳೆಯೊಡನೆ ಕಳೆಯಂತೆ ಮೂಡಿಬರುವ ಸಂಗತಿ ಈ ಮತೀಯ ಅಸಹನೆ. ಕನ್ನಡ ಸಾಹಿತ್ಯ ಕೃತಿಗಳಲ್ಲೂ ಈ ಅಸಹನೆಯ ಅಪಸ್ವರ ಅನೇಕ ಕಡೆ ಬಗೆ ಬಗೆಯಾಗಿ ಕೇಳ ಬಂದಿದೆ. ಅದರ ವಿವರಗಳು ಇಲ್ಲಿ ಪ್ರಸಕ್ತವಲ್ಲ.

ಇಂತಹ ಸಂದರ್ಭದಲ್ಲಿ ಸಕಲ ದೈವಸ್ವರೂಪವನ್ನು ಸಮಾನ ಗೌರವದಿಂದ ಸ್ತುತಿಸುವ, ಭಾಗವತ ಸಿದ್ಧಾಂತ. ಕನ್ನಡ ಸಾಹಿತ್ಯದಲ್ಲಿ ಒಂದು ಐತಿಹಾಸಿಕ ಅಗತ್ಯವಾಗಿಯೇ ಮೂಡಿಬಂದಿತು. ಭಾಗವತ ಧರ್ಮದ ಕವಿಗಳು ಸಮಾಜದ ಆರೋಗ್ಯವನ್ನು ಕಾಪಾಡಿದರು. ಮತೀಯ ಅಸಹನೆಯನ್ನು ತಡೆಗಟ್ಟಿದರು. ಭಕ್ತಿಸಾಹಿತ್ಯಕ್ಕೆ ಹೊಸ ಆಯಾಮವನ್ನೂ ವಿಸ್ತಾರ-ವೈಭವಗಳನ್ನೂ ತಂದುಕೊಟ್ಟರು. ಈ ದಿಶೆಯಲ್ಲಿ ಭಾಗವತ ಕವಿಗಳ ಸಾಧನೆ, ಪ್ರಭಾವ, ಸಿದ್ಧಿಗಳು ಕನ್ನಡ ಸಾಹಿತ್ಯದ ಹೃದಯಂಗಮವಾದ ಸಂಗತಿ ಎಂದೇ ನಮ್ಮ ಭಾವನೆ. ಭಾಗವತ ಕವಿಗಳ ಸಾಹಿತ್ಯ ಕೃಷಿಯಿಂದ ಕನ್ನಡ ಕಾವ್ಯ ಆರೋಗ್ಯಕರವಾಗಿ, ಸಮೃದ್ಧವಾಗಿ ಬೆಳೆದು ಒಂದು ಆದರ್ಶ

ಪರಂಪರೆಯನ್ನು ಸೃಷ್ಟಿಸಿ ಕೃತಾರ್ಥವಾಯಿತು ಎಂಬುದರ ಪರಿಶೀಲನೆಯನ್ನು ಸ್ಥೂಲವಾಗಿ ಮುಂದಿನ ಪುಟಗಳಲ್ಲಿ ಮಾಡಲಾಗಿದೆ.

## ರುದ್ರಭಟ್ಟ (ಸು. ಕ್ರಿ.ಶ. 1185)

ಚಿಕ್ಕಮಗಳೂರು ಜಿಲ್ಲೆಯ ದೇವನೂರು ಇಂದು ಒಂದು ಪುಟ್ಟಗ್ರಾಮ. ಆದರೆ ಇಷ್ಟು ಸಣ್ಣ ಹಳ್ಳಿಯಲ್ಲಿ ಮೂವತ್ತಕ್ಕೂ ಹೆಚ್ಚು ದೇವಾಲಯಗಳು. ಇದು ದೇವರ ದೇಗುಲಗಳ ಊರೇ ಸರಿ. ಇಂತಹ ಗ್ರಾಮ, ಕನ್ನಡ ಸಾಹಿತ್ಯದ ಇಬ್ಬರು ಶ್ರೇಷ್ಠ ಭಾಗವತ ಕವಿಗಳಿಗೆ ಜನ್ಮವಿತ್ತಿತು. ರುದ್ರಭಟ್ಟ ಇವರಲ್ಲಿ ಮೊದಲನೆಯವ. ಭಾಗವತ ಧರ್ಮದ ಪ್ರಭಾವಕ್ಕೆ ಒಳಗಾದ ಮಹಾಕವಿಗಳಲ್ಲಿ ಈತನದು ಮೊದಲನೆಯ ದೊಡ್ಡ ಹೆಸರು. ಜಗನ್ನಾಥವಿಜಯ ಈತನ ಪ್ರಸಿದ್ಧ ಕೃತಿ. ವೈದಿಕ ಕವಿಯೊಬ್ಬನು ಮೈ ಚಳಿ ಬಿಟ್ಟು ಕನ್ನಡಕ್ಕೆ ಒಲಿದುದು ಒಂದು ಮುಖ್ಯ ಸಂಗತಿ. ಆವರೆಗೆ ಸಂಸ್ಕೃತದ ವ್ಯಾಮೋಹಕ್ಕೆ ಒಲಿದು ಕನ್ನಡದ ಬಗ್ಗೆ ಅವಜ್ಞೆಯನ್ನೇ ತೋರುತ್ತಿದ್ದ ವೈದಿಕ ಕವಿಗಳು, ರುದ್ರಭಟ್ಟನಿಂದ ಪಾಠ ಕಲಿಯುವಂತಾಯಿತು. ಪಂಪಯುಗ ಎಂದು ಕರೆಯಲಾಗುವ ಎರಡು ಶತಮಾನಗಳಲ್ಲಿ (ಕ್ರಿ.ಶ. 10-12 ಶತಮಾನ) ಮೊದಲನೆ ನಾಗವರ್ಮ, ದುರ್ಗಸಿಂಹ ಮುಂತಾದ ಒಂದೆರಡು ವೈದಿಕ ಕವಿಗಳ ಹೆಸರು ಮಾತ್ರ ಅಪವಾದದಂತೆ ಗೋಚರಿಸುತ್ತವೆ. ಅವರೂ, ವೈದಿಕ ಪುರಾಣ ಕಾವ್ಯಗಳನ್ನು ಕನ್ನಡಕ್ಕೆ ತರುವ ಸಾಹಸ ಮಾಡಲಿಲ್ಲ. ಭಾಗವತ ಕಾವ್ಯವನ್ನು ಕನ್ನಡಿಸಿದ ಯಶಸ್ಸು ರುದ್ರಭಟ್ಟನದು. ವಿಷ್ಣು ಪುರಾಣ, ಭಾಗವತ, ಇವುಗಳಲ್ಲಿನ ಶ್ರೀಕೃಷ್ಣ ಚರಿತೆಯನ್ನೇ

ಹೃದಯಂಗಮವಾಗಿ ರಸಾರ್ದ್ರವಾಗಿ ಕವಿ ಜಗನ್ನಾಥವಿಜಯ ದಲ್ಲಿ ಹೇಳಿದ್ದಾನೆ.

ರುದ್ರಭಟ್ಟ ಭಾಗವತ ಸಂಪ್ರದಾಯದ ಸ್ಮಾರ್ತಬ್ರಾಹ್ಮಣ ಎಂದು ರಂ. ಶ್ರೀ. ಮುಗುಳಿಯವರೂ, "ಇವನು ವಿಷ್ಣುಭಕ್ತನಾದ ಸ್ಮಾರ್ತ ಕವಿ" 9(ಅ) ಎಂದು ಪಿ. ವಿ. ನಾರಾಯಣ ಅವರೂ 9(ಅ) ಸೂಚಿಸಿದ್ದಾರೆ. ಸ್ಮಾರ್ತ ಬ್ರಾಹ್ಮಣರು ಹರಿಹರರಲ್ಲಿ ಅಭೇದ ವನ್ನೆಣಿಸುವ ಸಂಪ್ರದಾಯದವರು. ಈ ಕಾರಣದಿಂದ ಭಾಗವತ ಧರ್ಮವನ್ನು ಮೈಗೂಡಿಸಿಕೊಳ್ಳುವುದು ರುದ್ರಭಟ್ಟನಿಗೆ ತೀರ ಸುಲಭವೂ-ಸಹಜವೂ ಆಯಿತು. ಅವನ ಆಶ್ರಯದಾತನಾಗಿದ್ದ ವನು ಹೊಯ್ಸಳ ಬಲ್ಲಾಳನ ಮಂತ್ರಿ ಚಂದ್ರಮೌಳಿ. ಆತನೂ ಪ್ರಾಯಶಃ ಸ್ಮಾರ್ತ ಬ್ರಾಹ್ಮಣನೇ. ಇಬ್ಬರೂ ಭಾಗವತದ ಕೃಷ್ಣನ ಮೋಹಕ ಕತೆಗೆ ಮರುಳಾದವರು. ಚಂದ್ರಮೌಳಿಯ ಒತ್ತಾಸೆಯಿಂದ ರುದ್ರಭಟ್ಟ ಜಗನ್ನಾಥವಿಜಯವನ್ನು ಬರೆದ. ಅದು ಆಶ್ರಯದಾತನಿಗೂ ಮೆಚ್ಚಿಗೆಯಾಯಿತು. "ಚಂದ್ರ ಮೌಳಿ ಪ್ರಮುಖ ನಿಖಿಳ ವಿದ್ವಜ್ಜನಂ ಮೆಚ್ಚೆ ರುದ್ರಾಂಕನೆ ಪೇಳ್ದ "10 ಈ ಮಹಾಕೃತಿ "ವೈಷ್ಣವ ಕಾವ್ಯರಸಂ ತುಳುಂ ಕಾಡುವ "10(ಅ) ರಸವತ್ಕೃತಿ. ಹೀಗೆ ರುದ್ರಭಟ್ಟ, ಕೃಷ್ಣ ಕಾವ್ಯವನ್ನು ತುಂಬುಭಕ್ತಿಯಿಂದ ರಚಿಸುತ್ತಿದ್ದಾನೆ. ವೀರಶೈವ ಯುಗದ ಶೈವ ಕವಿಗಳ ಕಾವ್ಯ ಸಂದರ್ಭದಲ್ಲಿ, ಈ ವೈದಿಕ ಕವಿ ಪ್ರಾರಂಭಿಸಿದ ಹೊಸ ಸಂಪ್ರದಾಯ ಚೇತೋಹಾರಿಯಾಗಿದೆ. ವಿಷ್ಣು ಭಕ್ತಿಯ ಮೋಹಕತೆಯೂ ಅಪೂರ್ವವಾದದ್ದೇ. ನಿರಾ ಕಾರವಾದ ಬಯಲರೂಪಿನ ಭಗವತ್ ತತ್ತ್ವಕ್ಕಿಂತ ಅಲಂಕಾರ ಪ್ರಿಯನಾದ ಶ್ರೀ ವಿಷ್ಣುವಿನ ದಿವ್ಯಮಂಗಳ ವಿಗ್ರಹದ ಉಪಾಸನೆ, ವರ್ಣನೆ, ಕಾವ್ಯರಚನೆ ಇತ್ಯಾದಿಗಳು ಶ್ರೀಸಾಮಾನ್ಯನ

ಹೃದಯದ ಸುಪ್ತಸೌಂದರ್ಯ ಪಿಪಾಸೆಯನ್ನು ತಣಿಸಿರಬಹು ದಲ್ಲವೆ? ಶ್ರೀ ಕೃಷ್ಣಕರ್ಣಾಮೃತದ ಲೀಲಾಶುಕನ ಈ ಮಾತು ನಮ್ಮ ರುದ್ರಭಟ್ಟನಿಗೂ ಸಲ್ಲುತ್ತದೆ :

"ಶೈವಾವಯಂ ನಖಲು ತತ್ರ ವಿಚಾರಣೀಯಂ
ಪಂಚಾಕ್ಷರೀ ಜಪಪರಾ ನಿತರಾಂ ತಥಾಪಿ
ಚೇತೋಮದೀಯಮತಸೀ ಕುಸುಮಾವಭಾಸಂ
ಸ್ಮೇರಾನನಂ ಸ್ಮರತಿ ಗೋಪವಧೂ ಕಿಶೋರಂ"[11]

(ನಾವು ಶೈವರು; ಸಂದೇಹ ಬೇಡ. ಪಂಚಾಕ್ಷರೀ ಜಪದಲ್ಲಿ ಸದಾ ನಿರತರು. ಹೀಗಿದ್ದೂ ನನ್ನ ಮನಸ್ಸು ಅತಸೀಕುಸುಮ ವರ್ಣದ ಮಂದಹಾಸಯುಕ್ತನಾದ ಆ ಗೋಪೀಕುವರನನ್ನೇ ನೆನೆಯುತ್ತದಲ್ಲಾ !)

ರುದ್ರಭಟ್ಟನ ಕೃಷ್ಣಭಕ್ತಿಪ್ರವಾಹ ಜಗನ್ನಾಥವಿಜಯದಲ್ಲಿ ತುಂಬು ಹೊಳೆಯಾಗಿ ಹರಿಯುತ್ತಿದೆ. ಸುಮಾರು ಹನ್ನೆರಡನೆ ಶತಮಾನದ ಅಂತ್ಯದಲ್ಲಿ (ಕ್ರಿ.ಶ. 1182) ರಚಿತವಾದ ಈ ಕೃತಿ ಹದಿನೆಂಟು ಆಶ್ವಾಸಗಳ ದೀರ್ಘ ಕಾವ್ಯ. ಬಸವಯುಗದಲ್ಲಿ ಮರೆಯಾಗುತ್ತಿದ್ದ ಚಂಪೂಕಾವ್ಯ ಇಲ್ಲಿ ಜೀವಂತವಾಗಿ ಉಳಿದು ಕೊಂಡಿದೆ. ಚಂಪೂಶೈಲಿಯ ಗಜಗಮನದ ಗಂಭೀರಗತಿ ಇಲ್ಲಿಯ ಲಕ್ಷಣ. ಭೂಭಾರಹರಣಕ್ಕಾಗಿ ತಾನು ಭೂಲೋಕದಲ್ಲಿ ದೇವಕೀ ಸುತನಾಗಿ ಜನಿಸುವೆನೆಂದು ಮಹಾವಿಷ್ಣು ಬ್ರಹ್ಮನೇ ಮೊದಲಾದ ದೇವತೆಗಳಿಗೆ ಭರವಸೆ ಕೊಡುವುದು ಮೊದಲ ಆಶ್ವಾಸದ ವಸ್ತು. ಮುಂದೆ ಕೃಷ್ಣ ಜನನ, ಗೋಕುಲ ಗಮನ, ಅಕ್ರೂರಾಗಮನ, ಗೋಕುಲ ನಿರ್ಗಮನ, ಕಂಸವಧೆ, ಹೀಗೆ ಕಥೆ ಮುಂದೆ ಮುಂದೆ ಕುತೂಹಲಕರವಾಗಿ ಸಾಗುತ್ತಾ, ಉಷಾ–ಅನಿರುದ್ಧರ ಪ್ರಣಯ, ವಿವಾಹ. ಕೆರಳಿದ ಬಾಣಾಸುರನೊಡನೆ ಕೃಷ್ಣನ ಯುದ್ಧ,

ವಿಜಯ, ಸಾಲ್ವವಧೆ ಇತ್ಯಾದಿ ರೋಮಾಂಚಕ ಕತೆಗಳೊಡನೆ ಮುಕ್ತಾಯವಾಗುತ್ತದೆ. ಈ ಮಹಾಕಾವ್ಯದ ಸ್ವಾರಸ್ಯ ಸೌಂದರ್ಯಗಳನ್ನು ಬಣ್ಣಿಸುವುದು ಈ ಪುಸ್ತಿಕೆಯ ಉದ್ದೇಶಕ್ಕೆ ಹೊರತಾದುದು. ಆದರೆ ಜಗನ್ನಾಥವಿಜಯದ ಮೂಲಕ ಮೊದಲ ಬಾರಿಗೆ ಕನ್ನಡಕಾವ್ಯದಲ್ಲಿ ಭಾಗವತ ಧರ್ಮ ಹೆಜ್ಜೆಯಿಟ್ಟಿತು ಎಂದು ಸೂಚಿಸುವುದು ನಮಗೆ ಪ್ರಕೃತ.

ತಮ್ಮ ಆಶ್ರಯದಾತನ ಸ್ತುತಿಯಿಂದಲೋ ಇಷ್ಟದೈವದ ಪ್ರಾರ್ಥನೆಯಿಂದಲೋ ಕಾವ್ಯ ಪ್ರಾರಂಭವಾಗುತ್ತಿದ್ದುದು ಆವರೆಗಿನ ರೂಢಿ. ಜೈನ ಕಾವ್ಯಗಳಲ್ಲಿ ತೀರ್ಥಂಕರ ಸ್ತುತಿ, ಜೈನಕವಿಗಳು ರಚಿಸಿದ ಲೌಕಿಕ ಕಾವ್ಯಗಳಲ್ಲಿ ಪರ್ಯಾಯವಾಗಿಯೋ ಪ್ರತ್ಯಕ್ಷವಾಗಿಯೋ ಆಶ್ರಯದಾತನ ಸ್ತುತಿ. ಇದು ಸಾಮಾನ್ಯ. ಆತನು ಅರಿಕೇಸರಿಯಿರಬಹುದು. ಸತ್ಯಾಶ್ರಯನಿರಬಹುದು. ವಾಗಧೀಶ್ವರಿಯಾದ ಶಾರದೆಯ ಸ್ತುತಿಯೂ ಸಹಜವಾಗಿಯೇ ಕವಿಗಳಿಗೆ ಪ್ರಿಯವಾದುದು. ರುದ್ರಭಟ್ಟನ ಜಗನ್ನಾಥವಿಜಯದಲ್ಲಿ "ಭೂಭಾರಚ್ಛೇದವಿನೋದಿ ಕೃಷ್ಣನ" ಸ್ತುತಿ ಮೊದಲಿಗೇ ಕಾಣುತ್ತದೆ. ಅನಂತರ ಕ್ರಮವಾಗಿ ಚತುರ್ಮುಖಬ್ರಹ್ಮ, ಉಮಾಕಾಮಿನೀ ಜೀವಿತೇಶನಾದ ಪರಮೇಶ, ಸೂರ್ಯದೇವ, ದೇವಗಣಪ, ವಾಣಿ, ಈ ದೇವ ದೇವಿಯರನ್ನು ಕವಿ ತುಂಬು ಗೌರವದಿಂದ ಸ್ತೋತ್ರ ಮಾಡುತ್ತಾನೆ. ಅವನ ಪ್ರಕಾರ, ಏಕಮೂರ್ತಿಯಾದ ಪರಮ ಜ್ಯೋತಿಯೇ ತ್ರಿಮೂರ್ತಿ ಸ್ವರೂಪದಲ್ಲಿ ಆವಿರ್ಭವಿಸಿತು.

" ಉದಯಸ್ಥಿತಿ ಸಂಹಾರ<br>
ಪ್ರದರ್ ಜಗಕ್ಕೆನಿಪ ಕಮಲಭವ ಹರಿಹರ ನಾ<br>
ಮದ ಪುರುಷಾಕಾರತ್ರಯ<br>
ಮದು ನಿನ್ನಾವಿಡಂಬಮತ್ತಿ ಪರಮಜ್ಯೋತೀ||12

ಎಂದಮೇಲೆ ಹರಿಹರರಲ್ಲಿ ಭೇದ ಸಲ್ಲದು. ಅವರು ಸಮಾನ ಗೌರವ–ಪೂಜೆಗಳಿಗೆ ಅರ್ಹರು. ಭಾಗವತ ಧರ್ಮದ ಈ ತತ್ತ್ವ ರುದ್ರಭಟ್ಟನ ಕಾವ್ಯದ ಮೂಲಧ್ವನಿ. ಈ ಅಂಶವನ್ನೇ ಮತ್ತಷ್ಟು ವಾಚ್ಯವಾಗಿ ಕವಿ, ಹದಿನೆಂಟನೆ ಆಶ್ವಾಸದಲ್ಲಿ ಪ್ರಕಟಿಸಿದ್ದಾನೆ. ಬಾಣಾಸುರ ಭಂಗದ ಸಂದರ್ಭದಲ್ಲಿ ಹರಿಹರರನ್ನು ಎದುರು ಬದುರು ನಿಲ್ಲಿಸಿಬಿಟ್ಟಿದ್ದಾನೆ. ಆ ಪ್ರಸಂಗವನ್ನು ಕೊಂಚ ನೋಡ ಬಹುದು.

ರಕ್ಕಸ ಬಾಣಾಸುರ ಅಪ್ರತಿಮ ಶಿವಭಕ್ತ. ಸಹಸ್ರಬಾಹು ಗಳ ಮಹಾಪರಾಕ್ರಮಿ. ಅವನ ಮಗಳು ಉಷೆ. ಯಾದವ ಕೃಷ್ಣನ ಮಗ ಅನಿರುದ್ಧನನ್ನು ಒಲಿದು ಬಿಡುವುದೆ? ಕನಸಿನಲ್ಲೇ ಅವನ ಬೇಟ, ಕೂಟಗಳು ನಡೆದು, ವಿರಹಕಾತರಳಾದ ಕನ್ಯೆ ತನ್ನ ಗೆಳತಿ ಚಿತ್ರಲೇಖೆಯ ನೆರವಿನಿಂದ ದೈವಸಮೂಹದಲ್ಲಿ ಅನಿರುದ್ಧನನ್ನು ಹುಡುಕಿ ಪಡೆದಳು. (ಅದು ಒಳ್ಳೆಯ ಕಾಲ. ಇಂಥ ಗೆಳತಿಯರು ಸಮೃದ್ಧವಾಗಿದ್ದರು!) ಗೆಳತಿಯ ಸಾಕ್ಷಿ ಯಲ್ಲಿಯೇ ಗಾಂಧರ್ವ ವಿವಾಹವೂ ನಡೆದು, ಯುವದಂಪತಿಗಳು ಬಾಣಾಸುರನ ಅರಮನೆಯ ಕೇಳೀ ಗೃಹದಲ್ಲಿಯೇ ಸುಖಸಂತಸ ದಿಂದಿದ್ದರು. ಅಂತಃಪುರದ ಅಧ್ಯಕ್ಷನಿಂದ ಈ ಕರ್ಣಕಠೋರ ವಾದ ಸುದ್ದಿ ಬಾಣಾಸುರನಿಗೆ ತಲುಪಬೇಕೆ?—(ಚಾಡಿಕೋರರಿಗೆ ಧಿಕ್ಕಾರ!) ರಕ್ಕಸ ಕೆರಳಿದ. "ನಾವು ಕನ್ಯಾದಾನ ಮಾಡುವ ಮೊದಲೇ ಇಂಥ ಕುಕಾರ್ಯವೆ? ಆ ಕನ್ಯಾಜಾರನನ್ನು ಕೂಡಲೆ ಎಳೆದು ತನ್ನಿ" ಎಂದು ಅಬ್ಬರಿಸಿದ. ಹೊಸ ಮದುವಣಿಗ. ಕನ್ಯೆಯ ಮಧುರ ಆಲಿಂಗನವನ್ನು ಸಡಿಲಿಸಿಯೇ ಕೈದುಗಳನ್ನು ಕೈಕೊಳ್ಳಬೇಕಾಯಿತು. ಅವನೂ ಅಸಾಮಾನ್ಯ ಶೂರ. ಸರಿ ಘೋರ ಯುದ್ಧಕ್ಕೆ ತೊಡಗಿತು. ದೇವತೆಗಳೂ ಪಕ್ಷ ಕಟ್ಟಿದರು.

ಈ ನೆಪದಲ್ಲಿ ಹರಿ-ಹರರು ಎದುರಾಗಬೇಕಾಯಿತು. ಬಾಣಾಸುರ ಶಿವ ಭಕ್ತನಲ್ಲವೆ? ಇದು ಸಂದರ್ಭ. ಆದರೆ ನಮ್ಮ ಭಾಗವತ ಕವಿ ಈ ದುರ್ಭರ ಪ್ರಸಂಗವನ್ನು ಭಾಗವತ ಧರ್ಮದ ಒಂದು ಪ್ರಮುಖ ತತ್ತ್ವ ನಿರೂಪಣೆಗೆ ಬಳಸಿಕೊಂಡಿದ್ದಾನೆ.

ಕೃಷ್ಣನು ತನ್ನ ವೈಷ್ಣವ ಚಕ್ರದಿಂದ ಬಾಣಾಸುರನ ತಲೆಯನ್ನು ತರಿಯಲು ಸಿದ್ಧನಾಗಿದ್ದಾನೆ. ಆ ಕೂಡಲೆ ವಿರೂಪಾಕ್ಷನು ವಿಶ್ವರೂಪನೆಡೆಗೆ ಧಾವಿಸಿ ಬಂದ.

''ಉಡುಗುಡುಗು ಚಕ್ರಮಂ ಸೀಂ
ಬಿಡದಿರ್ ಬಿಡದಿರ್ ಬಲೀಂದ್ರಸೂನುಗೆ''

ಎಂದು ಕೃಷ್ಣನ ಕೈತಡೆದ. ಮಾತ್ರವಲ್ಲ–

"ದ್ವಯಭಾವಂ ನಮಗಿಲ್ಲ ಬಲ್ಲವರೆ ನಾನುಂ ನೀನುಮೀಮಾತ
ನಿಶ್ಚಯ ಮೆಂತೆನಲೇಕ ಮೂರ್ತಿ ಮೊದಲೊಳ್ ಸಂದತ್ತದಿನ್ನೇಕ
ಮೂರ್ತಿಯೆ ಮೂರ್ತಿತ್ರಯಮಾಯ್ತು''[13]

ಕೃಷ್ಣ, ನಮಗೇಕೆ ವಿರಸ? ನಾವು ಬೇರೆ ಬೇರೆಯಲ್ಲ. ಮೂಲದ ಏಕಮೂರ್ತಿಯೆ ಮೂರಾದೆವಲ್ಲವೆ? ನೀನು ರಕ್ಷಣೆಗೆ, ಬ್ರಹ್ಮ ಸೃಷ್ಟಿಗೆ, ನಾನು ಪ್ರಳಯಕ್ಕೆ ಅಲ್ಲವೆ? ಎಂದು ತತ್ತ್ವವನ್ನು ಸಾರಿದ! ಕೃಷ್ಣನು ತುಂಬಿದ ಪ್ರೀತಿ ವಿಶ್ವಾಸದಿಂದಲೇ ಶಿವನನ್ನು ಮನ್ನಿಸಿದ. ''ಪರಮೇಶ, ಭಕ್ತಜನ ಶಂಕರ, ನಿನ್ನ ಮಾತಂ ನಾಂ ಮನ್ನಿಸಿದೆಂ"[14] ಎಂದು ಚಕ್ರವನ್ನು ಉಪಸಂಹರಿಸಿ ಬಾಣಾಸುರನನ್ನು ರಕ್ಷಿಸಿದ. ಶಿವಭಕ್ತನಿಗೆ ಕೃಷ್ಣಕೃಪೆ ದೊರಕಿತು. ಅಸುರ, ಮಹಾಕಾಳನೆಂಬ ಹೆಸರಿನಿಂದ ಪ್ರಮಥ ಸಾರೂಪ್ಯವನ್ನು ಪಡೆದು ಶಿವನೊಡನೆ ಕೈಲಾಸಕ್ಕೆ ತೆರಳಿದ.

ಇಂತಹ ಹೃದಯಂಗಮ ಚಿತ್ರವನ್ನು ಭಾಗವತ ಕವಿಯೇ ನೀಡಬಲ್ಲ. ಏಕದೈವದ ಬಗ್ಗೆ ವೀರನಿಷ್ಠೆಯುಳ್ಳ ಕವಿಯಾಗಿದ್ದರೆ, ಕೃಷ್ಣನು ಈ ಸಂದರ್ಭದಲ್ಲಿ ಬಾಣಾಸುರನನ್ನೂ ಅವನೊಡನೆ ಶಿವನನ್ನೂ ತರಿದು ಹಾಕಿದಂತೆಯೋ ಪರಾಭವಿಸಿ ಕಳಿಸಿದಂತೆಯೋ ಖಂಡಿತ ಚಿತ್ರಿಸುತ್ತಿದ್ದ.

"ಪೊಗಳೆಂ ಮಿಕ್ಕಿನ ಚಕ್ರಪಾಣಿ ಸರಸಿಜೋದ್ಭೂತ
ಸಂಕ್ರಂದನಾದಿಗಳಂ"[15] ಎಂಬ ಹರಿಹರನ ವೀರ
ಘೋಷಣೆಯನ್ನಾಗಲೀ
"ಶಿವಭಕ್ತರ್ಗೆ ಶಿವಂಗೆ ಮಾರಿದ ಮತಿಯೊಳ್ ಮರೆದು
ಅಜಗಿಜ ಹರಿಗಿರಿ ಸುರಪತಿಗಿರಪತಿ ಮೊದಲಾದ
ಉಡುಕುಳಿದೇವರನು ಅವನೀಶರು ಮೊದಲೆನಿಸಿದ
ಭವಿಗಳನು ತುತಿಸಿದೆನಾದೊಡೆ ಸಲೆ ಶಿವದೂಷಕ ನಾನು"[16]

ಎಂಬ ರಾಘವಾಂಕನ ಅಬ್ಬರದ ಉದ್ಗಾರವನ್ನಾಗಲೀ ನೆನಪಿಸಿಕೊಂಡರೆ ಭಾಗವತ ಕವಿಯು ಪ್ರಾರಂಭಿಸಿದ ಹೊಸ ಸಂಪ್ರದಾಯದ ಮಹತ್ವ ಅರಿವಾಗುತ್ತದೆ. ಸಮಾಜದಲ್ಲಿ ಬೆಳೆದು ಬಂದಿರಬಹುದಾದ ಮತೀಯ ಅಸಹನೆಯನ್ನು ತೊಡೆಯಲು, ಭಾಗವತ ಕಾವ್ಯ ಹೇಗೆ ನೆರವಾಯಿತು ಎಂಬುದೂ ಸ್ಪಷ್ಟವಾಗುತ್ತದೆ. ಈ ದಿಶೆಯಲ್ಲಿ ರುದ್ರಭಟ್ಟನದು ದೊಡ್ಡ ಹೆಜ್ಜೆ—ಮೊದಲ ಹೆಜ್ಜೆ.

## ನೇಮಿಚಂದ್ರ :

ನೇಮಿಚಂದ್ರ ರುದ್ರಭಟ್ಟನ ಸಮಕಾಲೀನ ಜೈನಕವಿ. ಇತನೂ ದ್ವಾರಸಮುದ್ರದ ಹೊಯ್ಸಳ ಮಂತ್ರಿ ಪದ್ಮನಾಭನ

ಆಶ್ರಯದಲ್ಲಿದ್ದವನು. ರುದ್ರನಂತೆಯೇ ಕೃಷ್ಣನ ಕಥೆಯು ಹೃದಯಂಗಮತೆಗೆ ಮಾರು ಹೋದವನು. ನೇಮಿಯ ನೇಮಿನಾಥ ಪುರಾಣದಲ್ಲಿ ಹರಿವಂಶ-ಕುರುವಂಶಗಳ ಚರಿತೆ ಬಂದುದುಂಟು—ತೀರ್ಥಂಕರನ ಭವಾವಳಿಯ ನೆಪದಲ್ಲಿ. "ಜಿನಸಮಯದೀಪಕನಾದ ನಾನು ಜಿನ ಕಥೆಯೊಳ್ ಸಂಧಿಸಿ ವಸುದೇವಾಚ್ಯುತ ಕಂದರ್ಪರ ಕಥೆಗಳನಿತುಮಂ ವಿವರಿಸುವೆಂ[17]" ಎಂದು ಈ ಕವಿಯು ಹೇಳಿಕೆ. ಸಂಪ್ರದಾಯದ ಜಾಡಿನಲ್ಲಿಯೇ ನೇಮಿನಾಥ ತೀರ್ಥಂಕರನ ಕಥೆ ಹರಿದಿದ್ದರೂ, ಕಂಸವಧೆಯವರೆಗಿನ ಕೃಷ್ಣಕಥೆ,. ಅದರಲ್ಲಿಯೂ ವಾಮನಾವತಾರ, ಬೃಂದಾವನದಲ್ಲಿ ಕೃಷ್ಣನ ಲೀಲಾವಿನೋದದ ಚಿತ್ರಣಗಳು. ಈ ಕಾವ್ಯಕ್ಕೆ ವಿನೂತನ ಕಾಂತಿಯನ್ನು ತಂದುಕೊಟ್ಟವೆ. ರುದ್ರಭಟ್ಟನನ್ನೂ ನೇಮಿಚಂದ್ರನನ್ನೂ "ಕನ್ನಡ ಸಾಹಿತ್ಯದ ಜಕ್ಕವಕ್ಕಿಗಳು"[18] ಎಂದು ವಿಮರ್ಶಕರು ಸರಿಯಾಗಿಯೇ ಕರೆದಿದ್ದಾರೆ. ರಾಮಾನುಜ ಸಂಪ್ರದಾಯ ನಾಡಿನಲ್ಲಿ ಬೇರೂರಿಸಿದ್ದ ಶ್ಯಾಮತಮಾಲದ ತಂಪು ನೆಳಲು, ಹೊಯ್ಸಳದೊರೆಗಳ ಉದಾರ ಧರ್ಮಸಾಮರಸ್ಯದ ದೃಷ್ಟಿ— ಈ ಪರಿಸರದಲ್ಲಿ ಈ ಜಕ್ಕವಕ್ಕಿಗಳು ಗಾಢಮಿತ್ರರೇ ಆಗಿರಬಹುದೆ ? ದ್ವಾರಸಮುದ್ರ— ಹತ್ತಿರದ ದೇವಪುರಗಳ ನಡುವೆ ಜೊತೆಜೊತೆಯಾಗಿಯೇ ನಡೆದಾಡಿರಬಹುದೆ? ಪದ್ಮನಾಭ ಮಂತ್ರಿಯ ಮನೆಯ ಅಂಗಳದಲ್ಲಿಯೋ, ಚಂದ್ರಮೌಳಿಯ ಮನೆಯ ಅಂಕಣದಲ್ಲಿಯೋ ಸಹೃದಯ ಶ್ರೋತೃವರ್ಗದ ಮುಂದೆ ಕೃಷ್ಣಭಕ್ತಿಯ ಹೊಳೆಯನ್ನು ಕೂಡಿಯೇ ಹರಿಯಿಸಿ ಕೃತಾರ್ಥರಾಗಿರಬಹುದೆ ? ಅಸಂಭವವಾದ ಬರಿಯ ಕನಸಿನ ಚಿತ್ರವಲ್ಲ ಇದು. ಭಾಗವತ ಕವಿಯ ಪ್ರಭಾವವೂ ಕೃಷ್ಣ ಮಾಯೆಯ ಮೋಹಕತೆಯೂ ಅಷ್ಟು ಗಾಢವಾದುದು.

## ಕುಮಾರವ್ಯಾಸ (ಸು. 1400)

ರುದ್ರಭಟ್ಟನ ಜಗನ್ನಾಥವಿಜಯದಲ್ಲಿ ಅಲ್ಲಲ್ಲಿ ಮಿಂಚಿದ ಭಾಗವತ ಧರ್ಮದ ಹೊಳಹು. ಕುಮಾರವ್ಯಾಸನಲ್ಲಿ ವಿಸ್ತಾರವಾಗಿ ಆಳವಾಗಿ ಪಸರಿಸಿಕೊಂಡಿದೆ. ಆತನನ್ನು ಭಾಗವತ ಧರ್ಮದ ಸಮರ್ಥ ಪ್ರತಿನಿಧಿ ಎನ್ನಬಹುದು. ಕುಮಾರವ್ಯಾಸ ಕನ್ನಡಕವಿಗಳಲ್ಲಿ ಅಗ್ರಮಾನ್ಯ. ಪಂಡಿತ ಪಾಮರರೆಲ್ಲರ ಗೌರವಕ್ಕೆ ಪಾತ್ರನಾದ ಜನಪ್ರಿಯ ಕವಿ. ಕ್ರಿ.ಶ. 15ನೆಯ ಶತಮಾನದ ಮಧ್ಯದಲ್ಲಿ ಬಾಳಿದ ಈ ಕವಿ (ಕ್ರಿ.ಶ. ಸು. 1432) ತನ್ನ ಒಂದೇ ಕೃತಿಯಾದ 'ಕರ್ಣಾಟಕ ಭಾರತ ಕಥಾಮಂಜರಿ' ಯಿಂದ ನಾಡಿನಲ್ಲಿ ಮನೆಮಾತಾಗಿ ಬಿಟ್ಟ. ಇಂದಿಗೂ ಕನ್ನಡ ಭಾರತವೆಂದರೆ ಕುಮಾರವ್ಯಾಸ ಭಾರತ. ಅದ್ಭುತ ಪಾತ್ರ ನಿರ್ಮಾಣ ಕೌಶಲ, ಉತ್ಕಟ ರಸಾವೇಶ, ಸಮರ್ಥ ರೂಪಕ ಪ್ರಪಂಚ ಸೃಷ್ಟಿ, ಪುಟಪುಟಗಳನ್ನೂ ತುಂಬಿದ ಕೃಷ್ಣಭಕ್ತಿಯ ಮೋಹಕ ವಿಲಾಸ. ಇವು ಗದುಗಿನ ಭಾರತವನ್ನು ಜನಸಾಮಾನ್ಯರ ನಾಲಗೆಯಲ್ಲಿ, ಗಮಕಿಗಳ ಕಂಠದಲ್ಲಿ, ವಿದ್ವಜ್ಜನ ಗೋಷ್ಠಿಯಲ್ಲಿ ಮೆರೆಯುವಂತೆ ಮಾಡಿತು. ಬಹುಮಟ್ಟಿಗೆ ಕುಮಾರವ್ಯಾಸ ಜನತೆಯ ಕವಿ. ಕನ್ನಡಸಾಹಿತ್ಯ ಚರಿತ್ರೆಯ ನಡುಹೊಸಿಲಲ್ಲಿ ನಿಂತವನು. ತನ್ನ ಹಿಂದೆ ಸುಮಾರು ಐದು ಶತಮಾನಗಳ ಕಾವ್ಯ ಪ್ರತಿಭೆಯನ್ನು ಹೀರಿಕೊಂಡು, ಸ್ವಂತ ಸತ್ವವನ್ನು ಮೆರೆದು ಮುಂದಿನ ಐದು ಶತಮಾನಗಳಿಗೆ ಆದರ್ಶವಾಗಿ ನಿಂತವನು. "ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು"[19] ಎಂಬ ಕವಿವಾಣಿ ಉತ್ಪ್ರೇಕ್ಷೆಯಲ್ಲ. ಆತ ಎದೆ ತುಂಬಿ, ಮೈತುಂಬಿ ಹಾಡತೊಡಗಿದರೆ ಕಲ್ಲು ಕಂಬಗಳೂ ಕರಗುತ್ತವೆ. ಸುತ್ತಲ ನಿಸರ್ಗದಲ್ಲಿ ಮಿಂಚಿನ ಸಂಚಾರವಾಗುತ್ತದೆ. ಚಿರಂಜೀವಿ ಅಶ್ವತ್ಥಾ

ಮನ ಕಣ್ಣು ಹನಿಗೂಡುತ್ತದೆ. ಗದುಗಿನ ವೀರ ನಾರಾಯಣನು ಮೆಚ್ಚಿ ಅಹುದು–ಅಹುದು ಎನ್ನುತ್ತಾನೆ.

ಕುಮಾರವ್ಯಾಸನಿಗೆ ಸಮಸ್ತ ಭಾರತ ಭಗವಂತನ ಲೀಲಾ ವಿನೋದ. ಅದು ಬರಿಯ ರಣರಂಗದ ಉನ್ಮತ್ತ ಆಲಾಪವಲ್ಲ. ಅರ್ಜುನ ವಿಕ್ರಮವಲ್ಲ, ಭೀಮನ ಸಾಹಸವಲ್ಲ. ಆದರೆ ಭಕ್ತ ಕುಟುಂಬಿ ಕೃಷ್ಣನ ಕಥೆ. ಶ್ರವಣಸುಧೆಯಾದ ಕವಿ ಕಥೆಗೆ ಅವನೇ ಕಾರಣ. ಕತೆಯ ಹಾಸು–ಹೊಕ್ಕು ಉಸಿರು ಎಲ್ಲವೂ ಅವನೇ. ಕಥೆ ಹೇಳಿದ ಕವಿಯೂ ಕೃಷ್ಣನೇ. "ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ".[20] ಮಾತ್ರವಲ್ಲ ಹಲವು ಕಿವಿಗಳಲ್ಲಿ ಈ ಕಥೆ ಕೇಳುವವರೂ ಕವಿಯ ದೃಷ್ಟಿಯಲ್ಲಿ "ಜಂಗಮ ಜನಾರ್ಧನರು!"[20] (ಅ) ಅವನ ಕಥೆ ಪಂಚಮ ಶ್ರುತಿ. ಅಲ್ಲಿ ಕಾಣಬೇಕಾದುದು "ಪದುಮನಾಭನ ಮಹಿಮೆ, ಧರ್ಮವಿಚಾರ ಮಾತ್ರವನು"[20] (ಆ) ಇಂತಹ ನಡೆದಾಡುವ ನಾರಾಯಣ ಕೃಷ್ಣ. ವಾಸ್ತವದಲ್ಲಿ "ಯಜ್ಞದಧಿಪತಿ ಯಜ್ಞ ಪುರುಷ, ಯಜ್ಞ ಸಾಧನ, ಸಚರಾಚರ ಗುರು."[21] ಆತನಿಗೆ ಪಾಪಪುಣ್ಯಗಳ ಲೇಪ ತಾಗದು. ಹಗೆಯ ಲೇಪ ಅಂಟದು. ಆತ ಸರ್ವವ್ಯಾಪಿಯೂ, ಸರ್ವಸಾಕ್ಷಿಯೂ ಆದ ಹೆದ್ದೈವ. ಗಗನ ಅವನ ನಾಭಿ, ದಶದಿಕ್ಕುಗಳು ಶ್ರೋತ್ರ. ಅವನ ಎದುರು "ಬಣಗುಗಳು ಭೀಮಾರ್ಜುನರು".[22] ವೇದರಾಶಿ ಅವನನ್ನು ಹೊಗಳಿ ದಣಿಯವು, ಮೂಜಗದ ದೈವದ ದೈವ ಆತ. ಈ ರಹಸ್ಯ, ಪಾಂಡವರಿಗೆ, ದ್ರೌಪದಿಗೆ, ಭೀಷ್ಮರಿಗೆ ಹೃದ್ಗತವಾದುದು ಹಾಗಿರಲಿ, ವೈರಿವ್ರತದ ದುರ್ಯೋಧನ, ಕರ್ಣರೂ ಅದನ್ನು ತಿಳಿದವರೇ. "ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ"[23] ದುರ್ಯೋಧನ. ಕರ್ಣನ ಪಾಲಿಗೆ ಅವನು ಮುಕ್ತಿಪ್ರದಾಯಕ

ದೈವ. "ಒಳಗೆ ಹೃದಯಾಂಬುಜದ ಮಧ್ಯಸ್ಥದಲಿ ಹೊರಗೆ ಕಿರೀಟಿಯ ಕನಕಮಯ ರಥದಗ್ರದಲಿ ಹೊಳೆಹೊಳೆವ"24 ದೈವ ಹರಿಯಲ್ಲದೆ ಬೇರೆಯಲ್ಲ. ಅಂತೆಯೇ "ಮರಣದ ಹೊತ್ತು ಕೃಷ್ಣನ ಕಾಂಬ ಸುಕೃತಫಲ ಇಳೆಯೊಳಗೆ ತನಗಲ್ಲದಾರಿಗೆ ಲಭಿಸುವುದು, ತಾನು ಧನ್ಯ ತಾಧನ್ಯ"24 ಎಂಬ ಸಂತಸ, ಆತ್ಮತೃಪ್ತಿಯಿಂದಲೇ ಕರ್ಣನು ಕೊನೆ ಉಸಿರೆಳೆದ. ಪರಮ ಕರುಣಾಸಿಂಧು ಕೃಷ್ಣನ ಕೃಪೆಯಿಂದಲೇ ಕೈವಲ್ಯವನ್ನು ಕಂಡ. ಈ ಅಭೇದದ ನಿಜದೇಚ್ಛರ ಸಮಾಧಿಯೇ ಭಾಗವತೋತ್ತಮನ ಸ್ಥಿತಿ. ಅಂಥವನೇ ಭಗವಂತನಿಗೆ ಪ್ರಿಯ. ಎಷ್ಟೆಂದರೆ "ತಂದೆ ಬೇಡೆಮಗೆ, ಅವ್ವೆ ಬೇಡೆಮಗೆ, ಇಂದುಮುಖಿಯರನೊಲ್ಲೆವಾವು, ಮನಸಂದು ಮೆಚ್ಚಿಹೆವೆಮ್ಮ ಭಕ್ತರಿಗೆಂಬನನವರತ".25 ಆದುದರಿಂದ ಇಡಿಯ ಭಾರತವೇ ಕುಮಾರವ್ಯಾಸನ ಪಾಲಿಗೆ "ಒಲಿದವರನುಜ್ಜೀವಿಸುವ ಮುರಮಥನನ ಬಗೆ".26 ಭಕ್ತರ ಹಸಿವು ಭಗವಂತನ ಹಸಿವು, ಭಕ್ತರ ನೋವು ಭಗವಂತನ ನೋವು. ಅವರ ಸುಖ ಅವನದು. ಇದೇ "ಭಕುತರ ಬಂಧು ಕೃಷ್ಣನ ಕೂರ್ಮೆ"27 ಎಂದು ಈ ಭಕ್ತ ಕವಿ ಸಾರುತ್ತಾನೆ.

ಹರಿಹರರಲ್ಲಿ ಅಭೇದ ಕಲ್ಪನೆ ಮೂಲ ಕೃತಿಯಲ್ಲಿ ಸೂಚ್ಯವಾಗಿ ಬಂದುದು ಕನ್ನಡ ಭಾರತದಲ್ಲಿ ಸವಿಸ್ತಾರವಾಗಿ ಪ್ರತಿಪಾದಿತವಾಗಿದೆ. ತತ್ಕಾಲದ ಸಾಮಾಜಿಕ ಅಗತ್ಯವೂ ಇದಕ್ಕೆ ಕಾರಣವಿರಬಹುದು. ಆರಾಧ್ಯದೈವ ವೀರನಾರಾಯಣನನ್ನು ಸ್ತುತಿಸಿದ ಉಸಿರಿನಲ್ಲಿಯೇ ಅಗಜಾರಮಣನನ್ನು ಕವಿ ಸ್ತೋತ್ರಮಾಡುತ್ತಾನೆ—ಪ್ರಾರ್ಥನಾ ಶ್ಲೋಕಗಳಲ್ಲಿ ಮಾತ್ರವಲ್ಲ ಎಡೆ ದೊರೆತಲ್ಲೆಲ್ಲ. ಅರ್ಜುನನ ದೃಢ ಪಾಶುಪತ ಭಕ್ತಿಯ ವರ್ಣನೆಯಲ್ಲಿ ಕುಮಾರವ್ಯಾಸ ಯಾವ ಶೈವ ಕವಿಯನ್ನೂ ಮೀರಿಸಿಬಿಡುತ್ತಾನೆ.

ಆವನ ಪಾಲಿಗೆ ಶಂಭು ಕರುಣಾಜಲಧಿ, "ಶಿವನಲಾ ಸಾಕ್ಷಾತ್ ಚತುರ್ದಶ ಭುವ ಕರ್ತೃ . . . ನಾದಬಿಂದು ಕಳಾತೀತ . . . ಜೀವಾತ್ಮ ಚೈತನ್ಯಾವಲಂಬನ . . . ಜಗದೈಕ ದೈವ, ಭುವನ ಚರಣ, ವಿಶ್ವತೋಮುಖ" ಇತ್ಯಾದಿ.[28] ದೂರ್ವಾಸಾತಿಥ್ಯ ಪ್ರಸಂಗ ಒಂದು ರೀತಿಯಲ್ಲಿ ಹರಿಹರ ಸಮಾಗಮದ ಸಂಕೇತವೇ ಸರಿ. ಏಕೆಂದರೆ ಈ ವಿಗಡಮುನಿ ಸಾಕ್ಷಾತ್ತು ಶಿವನವತಾರ. ಅಂಥವನು ದುರ್ಯೋಧನನ ವಿಕಟ ಬಯಕೆಯಂತೆ ಕೃಷ್ಣಭಕ್ತ ರಾದ ಪಾಂಡವರನ್ನು ಪರೀಕ್ಷಿಸಲು ಬಂದನಷ್ಟೆ. ಇದರಿಂದ ಮುನಿಗೆ ಒಳಗೊಳಗೇ ಸಂತಸದ ಉಬ್ಬು. ಹರಿಭಕ್ತರ ಮಹಿಮೆ ಈ ಪ್ರಸಂಗದಿಂದ ಲೋಕವಿಖ್ಯಾತವಾಗುತ್ತದೆ ಎಂಬ ಭರವಸೆ. ಕೃಷ್ಣನ ಕರುಣೆಯಿಂದ ದ್ರೌಪದಿಯ ಅಕ್ಷಯ ಪಾತ್ರೆ ಮತ್ತೊಮ್ಮೆ ತುಂಬಿತಷ್ಟೆ! ಅಲ್ಲಿ ಕಿಂಚಿತ್ಶಾಕಶೇಷವನ್ನು ಕಂಡು, ಅದನ್ನು ಕೈಕೊಂಡು, ಕೃಷ್ಣ ತಲೆದೂಗಿ ತೇಗಿದ. ಭಾಂಡ ತುಂಬಿತು ನಮಗೆ ಎಂದು ಉದ್ಗರಿಸಿದ. ಇತ್ತ ಹೊಳೆಯಲ್ಲಿ ನೀರಿಗಿಳಿದವರ ಹೊಟ್ಟೆ ಉಬ್ಬರಿಸಿತು. ತೇಗುಗಳು ಗಹಗಹಿಸಿದುವು. ಕೂಡಲೆ ಮುನಿ ಧ್ಯಾನದಿಂದ ನಡೆದ ಸಂಗತಿಯನ್ನು ಊಹಿಸಿ ತಿಳಿದ. ಆಗ ಅವನ ಪ್ರತಿಕ್ರಿಯೆ ಏನು? ಮೂಲ ಭಾರತದಲ್ಲಿ ಅವನು ಕಾಲಿಗೆ ಬುದ್ಧಿಹೇಳಿದ. ಅಪಮಾನಕ್ಕೆ ಹೆದರಿದ ಅವನ ಹೆಜ್ಜೆ ಗುರುತು ಮಾತ್ರ ಮರಳ ತೀರದಲ್ಲಿ ಉಳಿಯಿತು. ಆದರೆ ಕುಮಾರ ವ್ಯಾಸನ ದೂರ್ವಾಸ ಸಾಕ್ಷಾತ್ತು ಶಿವ. ಅವನಿಗೇನು ಭೀತಿ! "ಬಂದನೇ ಗೋವಿಂದ ಭಕುತರ ಬಂಧುವಲಾ"[29] ಎಂಬ ಸಂತಸದ ಉದ್ಗಾರ ಅವನಿಂದ. ಕೂಡಲೇ, ಶಿಷ್ಯರೊಡನೆ ಅವನ ಬಳಿಗೆ ಬಂದ. ಕೃಷ್ಣನೊಡನೆ ಸರಸವಾಡಿದ. "ಹಾಯ್ದಪ್ಪಿದನು ಹರಿಯ" ಎಂಬ ವರ್ಣನೆ ಕವಿಯದು. "ಬೇರು ನೀರುಂಡಾಗ

ದಣಿಯುವೆ ಭೂರುಹದ ಶಾಖೋಪಶಾಖೆಗಳು . . . ಭೂರಮಣ ನೀ ಸಂತುಷ್ಟನಾದರೆ ಬೇರೆ ಭೋಜನವೇಕೆ ಲೋಗರಿಗೆ?[30] ಎಂಬ ಹೃದಯಂಗಮ ತತ್ತ್ವವನ್ನೂ ಉಸಿರಿದ ಈ ಮುನಿ. ಕುಮಾರ ವ್ಯಾಸನ ದಿವ್ಯದೃಷ್ಟಿಗೆ ದೂರ್ವಾಸ–ಶ್ರೀಕೃಷ್ಣರ ಆಲಿಂಗನ ಹರಿ–ಹರ ಸಮಾಗಮದಂತೆಯೇ ಕಂಡಿದೆ.

ಹೀಗೆ ಹರಿಹರ ಅಭೇದ ಕಲ್ಪನೆಯನ್ನು ವಿಸ್ತರಿಸುವ ಅಥವಾ ಸೂಚಿಸುವ ಯಾವ ಸಂದರ್ಭವನ್ನೂ ಈ ಕವಿ ಕೈಬಿಡುವುದಿಲ್ಲ. ಕೆಲವೊಮ್ಮೆ ತಾನೇ ಉದ್ದೇಶಪೂರ್ವಕ ಎಂಬಂತೆ ಸೃಷ್ಟಿಸಿಕೊಳ್ಳು ವುದೂ ಉಂಟು. ಅಭಿಮನ್ಯು ವಧೆಯ ಸಂಗತಿಯನ್ನು ಧರ್ಮಜ ನಿಂದ ಕೇಳಿ ಅರ್ಜುನನ ಕೋಪ ಭಯಂಕರವಾಗಿ ಕೆರಳಿತು. "ಸುರನಗರಿ ನಡುಗಿತ್ತು, ಸುರಪತಿ ಹರನ ನೆನೆದನು, ಮೃತ್ಯು ಮರೆಹೊಕ್ಕಳು ಮಹೇಶ್ವರನ"[31] ಎಂಬಂತಹ ವೀರ ಕೋಪ ಅದು! ಧರ್ಮಜ, ಪದ್ಮವ್ಯೂಹದ ಬಾಗಿಲಲ್ಲಿ ರಕ್ಷಣೆಗೆ ನಿಂತಿದ್ದ ಸೈಂಧವನ ಹೆಸರು ಉಸಿರುತ್ತಿದ್ದಂತೆಯೇ ಕೆರಳಿದ ಕೋಪ ಅದು—ಪಾಪ, ಅಭಿಮನ್ಯುವನ್ನು ಕೊಂದವರು ಬೇರೆ ಯಾರೋ ಧೂರ್ತರು, ಕರ್ಣ ದುಶ್ಯಾಸನಾದಿಗಳು—ಆಗ ಅರ್ಜುನ ತನ್ನ ವೀರ ಪ್ರತಿಜ್ಞೆ ಯನ್ನು ಉದ್ಗರಿಸಿದ. "ನಾಳೆ ಪಡುವಣ ತರಣಿ ತೊಲಗುವ ಮುನ್ನ ಕೊಲುವೆನು ವೀರ ಸೈಂಧವನ"[32] ಎನ್ನುವುದೇ ಪ್ರತಿಜ್ಞೆ. ಒಂದು ವೇಳೆ ಇದು ಸಾಧ್ಯವಾಗದೆ ಹೋದರೆ ತನಗೆ ಬರಬಾರದ ಪಾಪಗಳು ಬರಲಿ–ಶಿಶುಹತ್ಯೆ ಮಾಡಿದವನ, ವಿಪ್ರನಿಂದಕನ– ಇತ್ಯಾದಿ ಆಣೆಗಳನ್ನು ಉಚ್ಚರಿಸುತ್ತಾ ಅರ್ಜುನನು ಮತ್ತೊಂದು ಮಾತನ್ನೂ ಸೇರಿಸಿದ: "ಹರಮುರಾರಿಯ ಭೇದವಾದಿಯ ನರಕ ವಾಗಲಿ ಎನಗೆ ಕೊಲ್ಲದಿರ್ದೊಡೆ ನಾಳೆ ಸೈಂಧವನ".[33] ಇದು ಭಾಗವತ ಕವಿಯ ಉದ್ಗಾರ. ಹರಿಹರರಲ್ಲಿ ಭೇದವನ್ನು ನುಡಿ

ವವನಿಗೆ ನರಕವೇ ಗತಿ! ಈ ತತ್ತ್ವವನ್ನು ಉಚ್ಚರಿಸಲು ಕವಿ ಎಲ್ಲ ಸಣ್ಣ ದೊಡ್ಡ ಸಂದರ್ಭಗಳನ್ನೂ ಬಳಸಿಕೊಳ್ಳುತ್ತಾನೆ ಎಂಬುದು ಮುಖ್ಯವಾದ ಮಾತು.

## ಲಕ್ಷ್ಮೀಶ (ಸು. ಕ್ರಿ.ಶ. 1550)

ಕುಮಾರವ್ಯಾಸನ ಈ ಪರಂಪರೆಯನ್ನೇ ಮುಂದುವರೆಸಿದ ಮಹಾಕವಿ ಲಕ್ಷ್ಮೀಶ. ರುದ್ರಭಟ್ಟನಂತೆ ದೇವನೂರು ಅವನು ನೆಲಸಿದ ಸ್ಥಳ. ಅಲ್ಲಿಯ ಲಕ್ಷ್ಮೀರಮಣ ಅವನ ಆರಾಧ್ಯದೈವ. ಗದುಗಿನ ಭಾರತದಂತೆಯೇ ತುಂಬ ಜನಪ್ರಿಯ ಕೃತಿ ಲಕ್ಷ್ಮೀಶನ ಜೈಮಿನಿ ಭಾರತ. ಈ ಕವಿಯ ಉತ್ಸಾಹದ ಕಥನ ಶೈಲಿಗೆ ವಾರ್ಧಕ ಷಟ್ಪದಿಯ ಗಂಭೀರ ಮನೋಹರ ಶ್ರುತಿಯ ಹಿಮ್ಮೇಳ. ದುಂಬಿಯಂತೆ ಝೇಂಕರಿಸುವ ನಾದ ಲಕ್ಷ್ಮೀಶನ ಷಟ್ಪದಿಗಳದು. ತುಂಬಿ ಮೊರೆಯುವ ಆದರ ದನಿಗೆ ಮನಸೋಲದವರಾರು? ಆದರೆ ಈ ಭಾಗವತ ಕವಿಯು ವಿನಯದ ನುಡಿ ಉಸಿರುತ್ತದೆ. ಇದು ಸಂಗೀತ ಸುಕಲಾ ನಿಪುಣನಾದ ದೇವಪುರ ಲಕ್ಷ್ಮೀರಮಣನ ವೀಣಾ ಝುಂಕೃತಿ–ತಾನು ಕೇವಲ ನಿಮಿತ್ತ ಮಾತ್ರ. ಈ ವಿನಯ ಭಕ್ತಕವಿಗೆ ಶೋಭಿಸುವಂತಹುದು.

ಜೈಮಿನಿ ಭಾರತ, ಅಶ್ವಮೇಧ ಪರ್ವದ ಕಥೆ. ಕೇವಲ ಒಂದು ವರ್ಷದ ಅವಧಿಯಲ್ಲಿ ಈ ರೋಚಕ ಕಥೆ ಮೂಡಿ ಮುಗಿದು ಬಿಡುತ್ತದೆ. ಆದರೆ ಇದು ಕಥೆಯೆ? ಕಥೆ, ಉಪ ಕಥೆಗಳ ಗೊಂಚಲು. ಹಣೆಗೆ ವೀರಪಟ್ಟವನ್ನೂ–ಪಂಥಾಹ್ವಾನ ವನ್ನೂ ಕಟ್ಟಿಕೊಂಡು ಜನ್ನಗುದುರೆ ವಿಜಯ ಯಾತ್ರೆ ಹೊರಟಿದೆ– ವಿಜಯನನ್ನು ಹಿಂದಿಟ್ಟುಕೊಂಡು. ಅದು ಹೆಜ್ಜೆ ಇಟ್ಟ ನಾಡು ನಾಡುಗಳಲ್ಲೆಲ್ಲ ಕಥೆ. ಕೃಷ್ಣನಂತಹ ಕಥೆಗಾರನೂ ಅರ್ಜುನನ

ಪಕ್ಕದಲ್ಲಿದ್ದವೆಂದರೆ ಅದರ ರೋಚಕತೆಗೆ ಎಣೆಯುಂಟೆ? "ಇನ್ನೊರೆಪೆಸಾಲಿಸು ಪಾರ್ಥ" ಎಂದು ಕಥೆ ತೊಡಗಿದರೆ ವಾಚಕನ ಕಿವಿ ನಿಮಿರುತ್ತದೆ. ಶೃಂಗಾರ, ವೀರ, ಅದ್ಭುತಗಳ ಹುಚ್ಚುಹೊಳೆ ಹರಿಯುತ್ತದೆ. ಜನ್ನಗುದುರೆಯದೇ ಒಂದು ಕಥೆ. ಯೌವನಾಶ್ವ, ಅನುಸಾಲ್ವ, ನೀಲಧ್ವಜ, ಉದ್ದಾಲಕ, ಸುಧನ್ವ, ಹಂಸಧ್ವಜ, ಪ್ರಮೀಳೆ, ಜ್ವಾಲೆ, ಚಿತ್ರಾಂಗದೆ, ಬಭ್ರುವಾಹನ, ಚಂದ್ರಹಾಸ ಆದೆಷ್ಟು ಪಾತ್ರಗಳು! ಆದೆಷ್ಟು ಕಥೆಗಳು! ಆದರೆ ಈ ಎಲ್ಲ ಪಾತ್ರ, ಕಥೆಗಳ ಹಿಂದೆ ಮುರಾರಿಯ ಕರುಣೆಯ ಸುವರ್ಣ ಸೂತ್ರ. ಅವನಿಲ್ಲದೆ ಕಥೆ ಮುಂದುವರೆಯದು. ಭ್ರಾತೃ-ಬಂಧುವಧೆಯಿಂದ ಖಿನ್ನನಾದ ಧರ್ಮಜನಿಗೆ ಅಶ್ವಮೇಧ ಮಾಡುವಂತೆ ಸಲಹೆ ಬಂದುದೇನೋ ವೇದ ವ್ಯಾಸರಿಂದ. ಆದರೆ ಕೃಷ್ಣನ ಸಲಹೆಯಿಲ್ಲದೆ ಏನೂ ನಡೆಯದು. ಅಶ್ವಮೇಧವೇನೋ ಕೃಷ್ಣನೇ ಹೇಳುವಂತೆ "ಕಕ್ಕಸವಹುದು. ವೀರರು ಇಳೆಯ ಮೇಲೆ ಕೈಯಿಕ್ಕಲರಿದು". ಆದಕ್ಕೆ ಧರ್ಮಜನ ಉತ್ತರ ಒಂದೇ—"ದೇವ ನಿಮ್ಮಡಿಯ ಕಾರುಣ್ಯವೊಂದುಳ್ಳೊಡೆ ಸದಾ ವಿಜಯರಾವು!"[34] ಪಾಂಡವರಿಗೆ ಜನ್ನಗುದುರೆ ದೊರಕಿದುದೇ ಅವರು ಕೃಷ್ಣನ ಮಿತ್ರರೆಂಬ ಕಾರಣದಿಂದ. ಅವರಿಗೆ ಕುದುರೆಯನ್ನು ಹೊಂದಿದ್ದ ಯೌವನಾಶ್ವನೂ ಬೇಕಾದಷ್ಟು ಧನ ಧಾನ್ಯದ ಸೆರವನ್ನು ಯಾಗಕ್ಕೆ ನೀಡಿದನಲ್ಲವೆ? ಮುಂದೆ ಯಜ್ಞದ ಕುದುರೆಯನ್ನು ತಡೆದು ಹೋರಿದ ಮಂದಿಯೂ ಕೃಷ್ಣಭಕ್ತರೇ, ಹಂಸಧ್ವಜ, ಸುಧನ್ವ, ಸುರಥ, ಚಂದ್ರಹಾಸ ಇತ್ಯಾದಿ. ನಡುವೆ ಒಮ್ಮೆ ಬಭ್ರುವಾಹನನೊಡನೆ ಅರ್ಜುನನ ಕಾಳಗ ಕೈಗಟ್ಟಿ, ಮಗನ ಪೆಟ್ಟಿಗೆ ಅವನು ತತ್ತರಿಸಿ ಬಿದ್ದಾಗ ಧಾವಿಸಿ ಬಂದು ಭಕ್ತನನ್ನು ಕಾಪಾಡಿದವನೂ ಕೃಷ್ಣನೇ. ರತ್ನಪುರದ ದೊರೆ ಮಯೂರಧ್ವಜ

ಮಹಾ ಪರಾಕ್ರಮಿಯಾಗಿದ್ದರೂ ತನ್ನ ಸರ್ವಸ್ವವನ್ನು ಅರ್ಜುನನಿಗೆ ಸಮರ್ಪಿಸಿ ಕೃಷ್ಣಾರ್ಪಣ ಎಂದು ಬಿಡುತ್ತಾನೆ! ಅಂತೆಯೇ ಪರಮ ವೀರನಾದ ಚಂದ್ರಹಾಸನು ಅರ್ಜುನನನ್ನು ಪುರಸ್ಕರಿಸಿದುದು, ಅವನು ತನ್ನಂತೆಯೇ ಕೃಷ್ಣಭಕ್ತನೆಂಬ ದಾಕ್ಷಿಣ್ಯಕ್ಕಾಗಿ ಮಾತ್ರ! ಹೀಗೆ ಹೆಜ್ಜೆ ಹೆಜ್ಜೆಗೂ ಕೃಷ್ಣನ ಗೆಜ್ಜೆಸದ್ದು ಈ ಕಾವ್ಯದ ಸಂಗೀತಕ್ಕೆ ನಿರುತ ಮಂಜುಳ ಶ್ರುತಿಯಾಗಿದೆ. ಈ ಮಾನವ ಶ್ರೇಷ್ಠರು ಕೃಷ್ಣ ಭಕ್ತರಾಗಿರುವುದು ಅಂತಿರಲಿ, ಜೈಮಿನಿ ಭಾರತದ ಜನ್ನಗುದುರೆಯೂ ಕೃಷ್ಣಭಕ್ತ! ವರ್ಷಾಂತ್ಯದಲ್ಲಿ ಕುದುರೆ ಹಸ್ತಿನಾವತಿಗೆ ಹಿಂತಿರುಗಿ ಬಂದಿತಷ್ಟೆ. ಯಜ್ಞದ ಕುದುರೆಯನ್ನು ತರಿಸಿ, ವಿಧ್ಯುಕ್ತ ಮಂತ್ರವನ್ನು ಪಠಿಸಿ ಧರ್ಮಜನು–

"ಪೋಗು ನೀನಶ್ವ ಲೋಕದೊಳಮರಪದಮಪ್ಪುದೀಗ,
ನಿನಗೆಂದೆಂದೆಂದುಮಳಿವಿಲ್ಲದುತ್ತಮ ಸ್ವರ್ಗಮಂ ಪಡೆ." 35

ಎಂದರೆ ಕುದುರೆ ಏನೆನ್ನಬೇಕು. ಬೇಡ ಬೇಡ ಎಂಬಂತೆ ತಲೆ ಕೊಡವಿತಂತೆ! ಅಶ್ವಹೃದಯವನ್ನು ಬಲ್ಲ ನಕುಲ ಅದರ ಮನಸ್ಸನ್ನು ಅರಿತು ನುಡಿದ; ಇದಕ್ಕೆ ಬೇಕಾದುದು ಉಪರಿ ಲೋಕದ ಅಶ್ವಪದವಿಯಲ್ಲ. ಇಲ್ಲಿಯೇ ಎದುರಿಗಿರುವ ಕೃಷ್ಣ ಸಾಯುಜ್ಯ. "ಕೃಷ್ಣನ ಶರೀರಮಂ ಪೊಗುವೆನೀಕ್ಷಣದೊಳು" 36 ಎನ್ನುತ್ತಿದೆ ಕುದುರೆ. ಕೃಷ್ಣ ಮಹಿಮೆ ಸಾಮಾನ್ಯವೇ? ಶಿಶುರ್ವೇತ್ತಿ ಪಶುರ್ವೇತ್ತಿ. ಮುಂದೆ ಅಂತೆಯೇ ಪರಮಾಶ್ಚರ್ಯದ ಕಥೆ ನಡೆಯಿತು. ಹಯದ ಎಡಗಿವಿಯನ್ನು ಶಾಸ್ತ್ರದಂತೆ ಸೀಳಿದರೆ ಉಕ್ಕಿದುದು ರಕ್ತವಲ್ಲ–ಮಹಾಕ್ಷೀರಧಾರೆ! ವಾಜಿಯ ಶಿರವನು ಛೇದಿಸಿದರೆ ಅದು ಇಳೆಗೆ ಬೀಳಲಿಲ್ಲ–ಇನಮಂಡಲವನ್ನು ಹಾರಿ ಸೇರಿತು. ಅಚ್ಯುತನ ಮುಖವನ್ನೇ ಅದರ ಜೀವಾತ್ಮ ಹೋಗಿ ಸೇರಿಬಿಟ್ಟಿತು. ಅಶ್ವದ ಬದುಕು ಕೃತಾರ್ಥವಾಯಿತು. ಅದರ ಕಳೇಬರ ಕರ್ಪುರವಾಯಿತು.

ಹೀಗೆ ಆದಿಯಿಂದ ಅಂತ್ಯದವರೆಗೆ ಜೈಮಿನೀ ಭಾರತ ಪುಣ್ಯಕರವಾದ ಕೃಷ್ಣ ಚರಿತಾಮೃತವೇ ಸರಿ. ಇದನ್ನು ಎಷ್ಟು ಬಾರಿ ಹಾಡಿ ಹೊಗಳಿದರೂ ಈ ಭಾಗವತ ಕವಿಗೆ ದಣಿವಿಲ್ಲ.

ಆದರೆ ಸರ್ವದೇವ ಸಮಭಾವದ ದೃಷ್ಟಿ ಈ ಕವಿಗೆ ಉಸಿರಿನಂತೆ ಸಹಜ. ಕಾವ್ಯದ ಎರಡನೆಯ ಪದ್ಯವೇ ಹೃದಯಂಗಮವಾದ ಶಿವಸ್ತುತಿ. ಅನಂತರ ವಿನಾಯಕ, ಶಾರದೆ ಇವರ ಪ್ರಾರ್ಥನೆ, ಹೀಗೆ ಈ ಕಾವ್ಯ ಮುಂದುವರೆಯುತ್ತದೆ. ಹಂಸಧ್ವಜನ ಮಗ ಸುಧನ್ವ ಹಾಗೂ ಸುರಥ ಇಬ್ಬರೂ ಕೃಷ್ಣಭಕ್ತರೇ. ಅರ್ಜುನನೊಡನೆ ಸೆಣಸಿ ತಲೆ ಕೆಡೆದು ಬಿದ್ದರಷ್ಟೆ. ಈ ಕೃಷ್ಣಭಕ್ತರ ರುಂಡಗಳು ಹೋಗಿ ಸೇರಿದುದು ಶಿವನ ಕೊರಳ ಮಾಲೆಯನ್ನು. "ಮುರಹರಂ ಪ್ರೀತಿಯಿಂ ತೆಗೆದು ನಭಕಿಡಲ್ ಅದಂ ರುಂಡಮಾಲೆಯೊಳಾಂತನಲ್ಲಿ ಶಿವನು" 37 ಎಂಬ ಮಾತು ಗಮನಾರ್ಹ. ಹರಿಭಕ್ತರು ಹರನಿಗೆ ಪ್ರಿಯರೂ ಹೌದು. ಅಂತೆಯೇ ಜೈಮಿನಿ ಭಾರತದ ಒಂದು ವರ್ಣವನ್ನು ಪ್ರೀತಿಯಿಂದ ಕೇಳಿದವರಿಗೆ– "ಹರಿಹರಾರ್ಚನೆಯ ಸುಕೃತಂಗಳಾದಪುವು" 38 ಎಂದು ಕವಿಯ ಫಲಸ್ತುತಿ.

ಚಂದ್ರಹಾಸನು ಚಂಡಿಕಾಲಯದಲ್ಲಿ ಮಾಡುವ ಪಾರ್ವತೀ ಸ್ತುತಿಯೂ ಹೃದಯಂಗಮ. ಮಾವ, ಮೈದುನರ ಘೋರ ದುರಂತವನ್ನು ಕಂಡ ಚಂದ್ರಹಾಸನು, ದೇವಿಯ ಎದುರು ಆತ್ಮವಧೆಗೆ ಸಿದ್ಧನಾದಾಗ, ಪೀಠದಿಂದಿಳಿದು ರುದ್ರಾಣಿಯೇ ಬಂದಳಂತೆ. ಅವನ ಯತ್ನವನ್ನು ತಡೆ ಹಿಡಿದು– "ನಿಚ್ಚಟದ ಹರಿಭಕ್ತಿಗಾಂ ಪ್ರೀತಿಯಿಂ ತಳೆದೆನಾತ್ಮವಧೆ ಬೇಡ" 39 ಎಂದು ವರನೀಡಲು ಸಿದ್ಧಳಾದಳಂತೆ. ಆದರೆ ಈ ಭಾಗವತೋತ್ತಮನು ಯಾಚಿಸಿದುದೇನು? "ಆವಾವ ಜನ್ಮ ಜನ್ಮಾಂತರದೊಳಗೆನಗೆ

ರಾಜೀವನಾಭನ ಭಕ್ತಿ ದೊರೆಕೊಳಲಿ"[40] ಎಂಬುದೇ. ತನ್ನ ಕಾಲಿಗೆರಗಿದ ಚಂದ್ರಹಾಸನನ್ನು ಕರದಡವಿ ಮೇಲೆತ್ತಿ ಅಂಬಿಕೆ ನುಡಿದಳು– "ಜಗದೊಳಾರಚ್ಯುತ ಪ್ರೀತಿಯಂ ಮಾಡುವರ್, ತನಗಿಷ್ಟರವರ್...ಹರಿಭಕ್ತಿ ನಿನಗೆ ಬೆಳವಿಗೆಯಾಗದಿರ್ಪುದೆ?"[41] ಎಂದು ಹರಸಿದುದಲ್ಲದೆ ವೈಷ್ಣವ ಶಕ್ತಿ ಬಳಸಿದ ಆಯುಧವನ್ನು ರಕ್ಷೆಯಾಗಿ ನೀಡಿದಳು. ಚಂದ್ರಹಾಸನ ಭಕ್ತಿ ಕೋಡಿವರಿಯಿತು. ತಾಯೆ, ಪಾರ್ವತಿ, ಪರಮ ಕಲ್ಯಾಣಿ. ಮಂತ್ರಮಯಿ, ಮಹಾ ಮಾಯೆ, ಕಾಲತ್ರಯದುಪಾಸ್ತಿಗಧಿದೇವಿ. . . ಪುಣ್ಯಮಯಿ. . . ಇತ್ಯಾದಿ ಸಹಸ್ರನಾಮಾವಳಿ. ಭಾಗವತ ಕವಿಯ ಉದಾರ ಹೃದಯಕ್ಕೆ ಅಂಬಿಕೆ, ಹರಿ, ಹರ, ಶಾರದೆ ಎಲ್ಲರೂ ಭಕ್ತಿಗೆ ಪಾತ್ರರೇ. ದೈವದಲ್ಲಿ ಭೇದ ಸಲ್ಲದು.

ಲಕ್ಷ್ಮೀಶನ ಕಾವ್ಯದಲ್ಲಿ ಭಾಗವತ ಧರ್ಮದರ್ಶನದ ಪ್ರಖರ ತೇಜಸ್ಸನ್ನು ಎದುರುಗೊಳ್ಳಬಹುದು. ರುದ್ರಭಟ್ಟನಲ್ಲಿ ಕಿರು ಜ್ಯೋತಿಯಾಗಿ ಬೆಳಗುತ್ತಿದ್ದುದು ಇಲ್ಲಿ ಮಹಾದೀವಿಗೆಯಾಗಿ ಪ್ರಜ್ವಲಿಸುತ್ತಿದೆ.

## ಭಾಗವತ ಧರ್ಮದ ಪ್ರಭಾವ

ಬದುಕನ್ನು ಭಗವಲ್ಲೀಲೆ ಎಂದು ಭಾವಿಸುವ, ಸಕಲ ಕರ್ಮಗಳೂ ಭಗವತ್ಪೂಜೆಯೆಂದೇ ತ್ರಿಕರಣ ಶುದ್ಧಿಯಿಂದ ಆಚರಿಸಲು ಬಯಸುವ, ಹಾಗೂ ಭಗವಂತನು ವಿಶ್ವದ ಅಂತರ್ಯಾಮಿಯಾಗಿರುವಂತೆ ಜಂಗಮರೂಪದಲ್ಲಿ ಮಾನವ ಸ್ವರೂಪದಲ್ಲಿ ಇಳೆಗೆ ಇಳಿದು ಬಂದು ಲೋಕವನ್ನು ಉದ್ಧರಿಸುತ್ತಾನೆಂದು ನಂಬುವ ಭಾಗವತ ಧರ್ಮದ ಗಾಢ ಪ್ರಭಾವ ಅನ್ಯ ಧರ್ಮದ ಕವಿಗಳ ಮೇಲೂ ಅಚ್ಚಳಿಯದ ಮುದ್ರೆ ಒತ್ತಿದಂತೆ

ತೋರುತ್ತದೆ. ಕುಮಾರವ್ಯಾಸನ ಸಮಕಾಲೀನ ಶೈವಕವಿ ಚಾಮರಸನ ಪ್ರಭುಲಿಂಗಲೀಲೆಯೂ ಈ ಮಾತಿಗೆ ಹೊರತಲ್ಲ. ಇಲ್ಲಿಯ ಪ್ರಭು ನಿರ್ಮಾಯನೆಂಬ ಗಣನಲ್ಲ–ಸಾಕ್ಷಾತ್ ಪರಶಿವನೇ. ''ನರನು ತಾ ದಿಟನೆಂಬ ಬಳಕೆಯ ಪರಿಯನಂಗೀಕರಿಸಿ ಪರರಿಗೆ ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯನು"[42] ಎಂಬ ಮಾತನ್ನು ಗಮನಿಸಬೇಕು. ಪ್ರಭುಲಿಂಗಲೀಲೆ ವಾಸ್ತವದಲ್ಲಿ ಜಂಗಮ ಶಿವನ ನರಲೀಲೆ–ಅವನ ಪರಮ ಕರುಣೆ. ಕೃಷ್ಣನಂತೆ ಪ್ರಭು ವಿಶಾಲ ವಟವೃಕ್ಷ. ಅದರ ಛಾಯೆಯಲ್ಲಿ ತಮ್ಮ ತಮ್ಮ ಆಟಗಳನ್ನಾಡುತ್ತ ವಿನೋದಿಸುವ, ಬಳಲುವ, ದುಃಖಿಸುವ, ಕಡೆಗೆ ಪ್ರಭುವಿನ ಕಾರುಣ್ಯ ವೀಕ್ಷಣದಿಂದ ಸಂತೈಸಿಕೊಳ್ಳುವ ಪಾತ್ರಗಳು–ಬಸವ, ಸಿದ್ಧರಾಮ, ಮುಕ್ತಾಯಕ್ಕ, ಗೊಗ್ಗಯ್ಯ ಇತ್ಯಾದಿ. ಎಲ್ಲರೂ ಪ್ರಭುವಿನ ವಾತ್ಸಲ್ಯವಾರಿಧಿಯಲ್ಲಿ ಮಿಂದು ಪುನೀತರಾದವರೇ. ಇನ್ನು ರತ್ನಾಕರವರ್ಣಿಯ ಭರತೇಶ ಮತ್ತೊಬ್ಬ ಕೃಷ್ಣನೇ ಸರಿ. ಆದರ್ಶ ಪತಿ, ಸುತ, ಬಂಧು, ದೊರೆ, ಅಣ್ಣ, ಸ್ನೇಹಿತ, ಗುರು ಭಕ್ತ, ಯೋಗ ಭೋಗ ಸಮನ್ವಯಾಚಾರ್ಯ ಅಲೌಕಿಕ ವ್ಯಕ್ತಿ. "ವಿಷಯ ಚಿತ್ತವನು ಆತ್ಮದೊಳು ನಿಲಿಸಿದ''[43] ಚಿದಂಬರ ಪುರುಷ. ಜೈನ ಸಂಪ್ರದಾಯ ಕಾವ್ಯಕ್ಕೆ ವಿರೋಧವಾಗಿ ತೋರುವ ಭರತೇಶ ವೈಭವ ಕಾವ್ಯಕ್ಕೆ ಭಾಗವತ ಕವಿ ಕುಮಾರವ್ಯಾಸನ ಪ್ರೇರಣೆ ದೊರಕಿರಲಾರದೆ?

ಹೀಗೆ ವಿಶಿಷ್ಟ ಜೀವನದೃಷ್ಟಿಯೊಂದನ್ನು ಕಣ್ಣ ಮುಂದಿಟ್ಟುಕೊಂಡು, ಅದರ ಹೊಳಪನ್ನು ತಮ್ಮ ಕಾವ್ಯದ ಹೃದಯವಾಗಿಸಿದ ಭಾಗವತ ಕವಿಗಳು ಒಂದು ಆದರ್ಶ ಪರಂಪರೆಯನ್ನೇ ಕನ್ನಡ ಸಾಹಿತ್ಯದಲ್ಲಿ ಬೆಳೆಸಿದರು. ಭಗವದ್ವಿನಯ, ಲೋಕವನ್ನು ಮಾಯೆ–ಮಿಥ್ಯೆಯೆಂದು ಭಾವಿಸದೆ ಭಗವಂತನ ಲೀಲಾವಿನೋದ

ಎಂದು ಭಾವಿಸುವ ಮನೋಧರ್ಮ ಜನಜೀವನವನ್ನು ಹಸನು ಮಾಡಿತು. ಸ್ವಕರ್ಮ, ಸ್ವಕರ್ತವ್ಯಗಳನ್ನು ನಿಷ್ಠೆಯಿಂದ ಆಚರಿಸುವುದು ಭಗವಂತನ ಪೂಜೆಯೇ ಸರಿ ಎಂಬ ಶುಭದೃಷ್ಟಿಯನ್ನು ಬೆಳಸಿತು. ಮುಖ್ಯವಾಗಿ ಅನ್ಯಮತ-ಅನ್ಯದೈವದಲ್ಲಿ ಅಸಹನೆ ಅದೆಷ್ಟು ಕ್ಷುಲ್ಲಕ ಎಂಬುದನ್ನು ತೋರಿಸಿಕೊಟ್ಟಿತು. ಭಾಗವತ ಕವಿಗಳು ತಮ್ಮ ಕಾವ್ಯದಲ್ಲಿ ನಿರೂಪಿಸಿದ ಈ ಆದರ್ಶಗಳು ಅನ್ಯಮತದ ಕವಿಗಳನ್ನೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ಆದರೆ ನಿಸ್ಸಂದೇಹವಾಗಿ ಪ್ರಭಾವಿಸಿದವು. ಅವರ ಕಾವ್ಯದರ್ಶನಕ್ಕೆ ವಿನೂತನ ಕಾಂತಿಯನ್ನೂ ತಂದು ಕೊಟ್ಟವು.

ಭಾಗವತ ಧರ್ಮ-ಕಾವ್ಯದ ಪ್ರಭಾವ ನವೋದಯ ಕಾಲದಲ್ಲೂ ಬಹುಮಟ್ಟಿಗೆ ಉಳಿದುಬಂದಿತು. ಅನೇಕ ಹಿರಿಯ ಕವಿಗಳ ಮೇಲೆ ಈ ಧರ್ಮ-ದರ್ಶನದ ನಿಚ್ಚಳ ಪ್ರಭಾವವನ್ನು ಗುರುತಿಸಬಹುದು. ಒಂದು ಉತ್ತಮ ಉದಾಹರಣೆಯೆಂದರೆ ಪು.ತಿ.ನ. ಅವರು (ಶ್ರೀ ಪು. ತಿ. ನರಸಿಂಹಾಚಾರ್ಯರು).

ಪು.ತಿ.ನ.ರು ನವೋದಯ ಕಾವ್ಯದ ರತ್ನತ್ರಯರಲ್ಲಿ ಒಬ್ಬರು. ದ.ರಾ. ಬೇಂದ್ರೆ ಹಾಗೂ ಶ್ರೀ ಕುವೆಂಪು ಅವರಂತೆ ಈ ಯುಗದ ಮಹತ್ವದ ಕವಿ. ತಮ್ಮ ಗೀತ ನಾಟಕಗಳು, ವಿಕಟ ಕವಿ ವಿಜಯ ಎಂಬ ರಾಜಕೀಯ ಪ್ರಹಸನ, ರಾಮಾಚಾರಿಯ ನೆನಪು, ಈಚಲು ಮರದ ಕೆಳಗೆ ಇತ್ಯಾದಿ ಪ್ರಬಂಧ ಸಂಕಲನಗಳಿಂದ ಅವರು ಕನ್ನಡ ನಾಡಿಗೆ ಚಿರಪರಿಚಿತರು. ಅವರ ಹಂಸದಮಯಂತಿ ಗೀತರೂಪಕಕ್ಕೆ ಕೇಂದ್ರ ಸಾಹಿತ್ಯ ಅಕ್ಯಾಡಮಿಯ ಪ್ರಶಸ್ತಿಯೂ ಬಂದಿತು. ತಮ್ಮ 76ನೇ ವರ್ಷದ ಹರೆಯದಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ

ಅಧ್ಯಕ್ಷರಾದ ಈ ಹಿರಿಯರು ನಮ್ಮ ಸಾಹಿತ್ಯದ ರುಚಿ-ಶುಚಿಗಳ ಮೂರ್ತಿಮಂತ ಸ್ವರೂಪವಾಗಿ ಕಾಣುತ್ತಾರೆ. ಚಿಂತನ ಶೀಲತೆ, ಆಧ್ಯಾತ್ಮ ದೀಪ್ತಿ, ರಸಾನುಭವದತ್ತ ಸದಾ ತುಡಿತ ಇವುಗಳಿಂದ ಪು.ತಿ.ನ. ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕಾಣಿಕೆ ಸಲ್ಲಿಸಿದ ಭಾಗವತ ಕವಿಯಾಗಿದ್ದಾರೆ. ಸಂಪ್ರದಾಯದಿಂದ ಬಂದ, ನಿತ್ಯಾಚರಣೆ ಯಿಂದ ಬಲಿಷ್ಠವಾದ ಶ್ರೀ ರಾಮಾನುಜ ಧರ್ಮದ ಶ್ರದ್ಧೆ ಅವರ ಕಾವ್ಯಮನೋಧರ್ಮವನ್ನೂ ಸಂಸ್ಕರಿಸಿರುವುದು ತೀರ ಸಹಜ. ಮಲೆದೇಗುಲದಂತಹ ಆಧ್ಯಾತ್ಮ ಕೃತಿಗಳಲ್ಲಿ ಭಗವತ್ ಕೈಂಕರ್ಯ, ಪ್ರಪತ್ತಿಗಳ ಗಾಢ ಒಲವನ್ನು ಗುರುತಿಸುವುದು ಸಾಧ್ಯ.

ಇಂತಹ ಕವಿಮನೋಧರ್ಮಕ್ಕೆ ಭಾಗವತ ಧರ್ಮ-ದರ್ಶನ ತೀರ ಹತ್ತಿರವಾದದ್ದು. ಪುತಿನ ಕಾವ್ಯಧರ್ಮದ ಆಯಾಮ ಭಾಗವತ ದರ್ಶನದಿಂದ ಮತ್ತಷ್ಟು ಹಿಗ್ಗಿದೆ. ವೀರವೈಷ್ಣವ ಸಂಪ್ರದಾಯದ ಈ ಕವಿ ಅತ್ಯಂತ ತನ್ಮಯತೆಯಿಂದ ಶಿವತಾಂಡವ ನೃತ್ಯವನ್ನು ಚಿತ್ರಿಸಬಲ್ಲರು, ನಟರಾಜ ಶಿವನನ್ನು ಸ್ತುತಿಸ ಬಲ್ಲರು, ಶಿವ-ಶಿವೆಯರ ಮಧುರ ಪ್ರಣಯವನ್ನು ಸುಂದರ ಉಪಮೆಯಾಗಿಸಬಲ್ಲರು. ವೈರುಧ್ಯಗಳ ನಡುವೆ ಶಾಂತಮನಸ್ಥಿತಿ ಯನ್ನು ಸಾಧಿಸುವ ಶಂಭುವನ್ನು ಸೌಂದರ್ಯದ ಪ್ರತಿಮೆಯಾಗಿ ಭಾವಿಸಬಲ್ಲರು. ರುದ್ರಭಟ್ಟನು ಕೃಷ್ಣನಿಗೆ ಒಲಿದಂತೆಯೇ ಪುತಿನ ಶಿವನಿಗೂ ಮನಸ್ಸು ತೆರಬಲ್ಲರು. ಗಣೇಶದರ್ಶನ ಕಾವ್ಯದಲ್ಲಿ ನಿರೂಪಿತವಾದ ಶಿವತಾಂಡವ ದರ್ಶನ ನಮ್ಮ ಕನ್ನಡ ಕಾವ್ಯದ ಅಪೂರ್ವ ಭಾವಗೀತೆ. ರಸೋತ್ಕಟತೆಯಲ್ಲಿ ಅದು ಹರಿಹರನನ್ನು ನೆನಪಿಸುತ್ತದೆ. ಇತರ ಕಾವ್ಯ ಸಂಗ್ರಹಗಳಿಂದ ಒಂದೆರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ನೋಡುವುದು ಸಾಧ್ಯ.

ಸಂಜೆಬೆಳಕು ತನ್ನ ಹೃದಯಂಗಮ ವರ್ಣದಿಂದ ಕವಿಯನ್ನು ಸೆಳೆಯುತ್ತದೆ. ಆಗ ಹೊಮ್ಮುವ ಉಪಮೆಯಿದು :

"ತವಸಿಶಿವ ಪಾರ್ವತಿಯು ಸಸುನೋಡುತೆವೆ ಮುಚ್ಚಿದಂದದಿ..."[44]

ಕತ್ತಲ ಗಾಢತೆ, ಗಂಭೀರತೆ ಇಲ್ಲಿ ಶಿವನ ತಪಸ್ಸು. ಅಂತಹ ತಪಸ್ಸನ್ನೂ ಕ್ಷಣಕಾಲ ಕಲಕಿತು, ಅನುರಾಗಿಣಿ ಹೈಮವತಿಯ ಸಾಲಂಕೃತ ದರ್ಶನ. ಆದರೆ ಅದು ಅರೆ ಚಣಮಾತ್ರ. ಅರೆಗಣ್ದೆರೆದ ಶಿವ ಮತ್ತೆ ಧ್ಯಾನಮಗ್ನನಾದ. ಕತ್ತಲು ಮುಸುಕಿತು.

ಗಣೇಶನೆಂದರೆ ಯಾರು? "ಶಿವನುರಿಗಣ್ಣಿನ ಬೆಳುದಿಂಗಳು!"[45] ಈ ರೂಪಕ ಆ ಜೆಂಕಿಗಣ್ಣನ ಮಗನ ಮುದ್ದು ಮೋಹಕತೆಯನ್ನು ಅದೆಷ್ಟು ಚೆಲುವಾಗಿ ಮೂಡಿಸಿದೆ! ಹಾಗೆಯೇ ಕೈಲಾಸವೆಂಬುದು "ಶಿವಗಣಗಳ ಉದ್ಯಾನವನ"[46] ಎಂಬ ವರ್ಣನೆ.

ನಂದಿಬೆಟ್ಟದ ಮೇಲೆ ಮಹಾತಪಸ್ವಿಯಂತೆ ನಡೆದಾಡುವ ಸಂತ ಗಾಂಧಿ ಪುತಿನ ಅವರ ಕಣ್ಣಿಗೆ ತೋರುವುದು ಹೀಗೆ :

"ಗಿರೀಶನೊಲದ್ರಿಯ ನಡೆವ ಮಹಾತ್ಮ
ಅವನ ಹಿಂಬಾಲಿಸುವ ಗಣಗಳಂತೆ" ಇತರರು[47]

ಭಕ್ತಸೇವಿತ ವಿರಾಗಿ ಈ ಶಿವ—ಈ ಗಾಂಧಿ.

ಹೇಮಾವತಿಯನ್ನು ಕಂಡಾಗ "ಉರಿಯೊಳಿದ್ದ ಶಿವಸತಿ" ಎನಿಸುತ್ತದೆ ಕವಿಗೆ. ಲೋಕವನ್ನು ಹಬ್ಬಿದ ಕತ್ತಲನ್ನು ಪರಿಭಾವಿಸಿದಾಗ—"ತಾರಾಮಂಡಲ ಜಟೆಯಿಂದಿಳಿಗವತರಿಸುವ ಶೀತಲ ಶಿವಸ್ಪರ್ಶ"[49] ಎನಿಸುತ್ತದೆ. ಅಂತೆಯೇ ಆಕೆ ಸರ್ವಮಂಗಳೆ, ಶೀತಲೆ. ಆಗಸದಲ್ಲಿ ಬೆಳ್ಳಗೆ ತೇಲುವ ಶರತ್ಕಾಲದ

ಮೋಡವನ್ನು ಕಂಡರೆ ಈ ಕವಿಗೆ—"ಮೇರುತೀರದಿ ಜಳಕ ಮಾಡುವ ಶಿವನ ಗೂಳಿ" ಎಂಬ ಭವ್ಯರೂಪಕ ಮನದಲ್ಲಿ ಮೂಡುತ್ತದೆ.[49] ತಮ್ಮ ಸುಂದರ ಕವನಗಳಲ್ಲಿ ಒಂದಾದ 'ನೇರಿಳೆ'ಯಲ್ಲಿ ಆ ಮೋಹಕ ಫಲವನ್ನು ಕುರಿತು–ಇದು ರಸನೆಗೆ ಸಾಲಗ್ರಾಮ ಎಂದ ಕವಿ, ಅದೇ ಉಸಿರಿನಲ್ಲಿ ಇದು "ಜಿಹ್ವಾನ ಭಕ್ಶ್ಯಂಭು"[50] ಎಂದು ನಿರಾಯಾಸವಾಗಿ ನುಡಿದುಬಿಡುತ್ತಾರೆ.

ಈ ವೈಷ್ಣವ ಕವಿಯ ಮನಸ್ಸನ್ನು ರೂಪಿಸಿದ ಭಾಗವತ ಪ್ರಜ್ಞೆಯೇ ಕವಿಗೆ ಇಂತಹ ಔದಾರ್ಯವನ್ನೂ ಆರೋಗ್ಯಕರ ದೃಷ್ಟಿಯನ್ನೂ ನೀಡಿದೆ. ಪುತಿನ ಅವರ ಅಪ್ರಕಟಿತ ಕೃತಿ ರಸ ಚಿಂತನದ ಎರಡು ಪ್ರಾರ್ಥನಾಪದ್ಯಗಳು ಶಿವನಿಗೆ ಮೀಸಲು.

"ಶಂಭುಗೆ ಸುಂದರನಿಗೆ ಶರಣು
(ಆತಂ) ತುಳಿಯಲಿ ತನುಮಂ"[51]

ಎಂದು ಕವಿಯ ಪ್ರಾರ್ಥನೆ.

ಕನ್ನಡಕಾವ್ಯ ಪರಂಪರೆಯಲ್ಲಿ ಭಾಗವತ ಧರ್ಮ ಹೇಗೆ ಪ್ರಭಾವಶಾಲೀ ದರ್ಶನವಾಗಿ ಒಡಮೂಡಿತೆಂಬುದನ್ನು ಭಾಗವತ ಕವಿಗಳು ಎಂತಹ ವಿಶಿಷ್ಟ ಕಾಣಿಕೆಯನ್ನು ಸಲ್ಲಿಸಿದ್ದಾರೆಂಬುದನ್ನೂ ಈವರೆಗೆ ಪರಿಶೀಲಿಸಿದೆವು. ಎಲ್ಲ ಭಾಗವತ ಕವಿಗಳ ಕಾವ್ಯ ಪರಿಶೀಲನೆಯಾಗಲೀ, ಉದಾಹರಿಸಿದ ಕಾವ್ಯಗಳ ಸಮಗ್ರ ವಿಮರ್ಶೆ ಯಾಗಲೀ ಈ ಪುಸ್ತಿಕೆಯ ವ್ಯಾಪ್ತಿಗೆ ಹೊರತಾದುದು. ಭಾಗವತ ಧರ್ಮದ ಪ್ರಮುಖ ಲಕ್ಷಣಗಳನ್ನೂ, ಅವು ಕನ್ನಡಕಾವ್ಯಗಳಲ್ಲಿ ನಿರೂಪಿತವಾಗಿರುವ ಪರಿಯನ್ನೂ ಇಲ್ಲಿ ಚಿಂತಿಸಲಾಗಿದೆ. ಉದಾ ಹರಣೆಗಾಗಿ ಮಾತ್ರ, ರುದ್ರಭಟ್ಟ, ಕುಮಾರವ್ಯಾಸ, ಲಕ್ಷ್ಮೀಶ, ಈ ಪ್ರಾತಿನಿಧಿಕ ಕವಿಗಳನ್ನು ಆರಿಸಿಕೊಳ್ಳಲಾಗಿದೆ. ಈ ಕೃತಿಯು

ವಿಷಯಕ್ಕೆ ಪ್ರಸ್ತುತವಾದ ಅಂಶಗಳನ್ನು ಮಾತ್ರ ಉದಾಹರಿಸ ಲಾಗಿದೆಯೇ ವಿನಹ ಆ ಕವಿಗಳ ಕೃತಿಗಳ ಇತರ ಹೃದಯಂಗಮ ಅಂಶಗಳನ್ನಲ್ಲ. ಹಾಗೆಯೇ ಸರ್ವೋದಯ ಕಾವ್ಯದಲ್ಲಿ ಭಾಗವತ ಪ್ರಜ್ಞೆಯನ್ನು ತುಂಬ ತೀವ್ರವಾಗಿ ಮೈಗೂಡಿಸಿಕೊಂಡು ಅಭಿ ವ್ಯಕ್ತಗೊಳಿಸಿದ ಪುತಿನ ಅವರನ್ನು ಮಾದರಿಯಾಗಿ ಗುರುತಿಸ ಲಾಗಿದೆ. ಇತರ ಕವಿಗಳ ಮೇಲಿನ ಭಾಗವತ ಧರ್ಮದ ಪ್ರಭಾವ ವನ್ನು ಪರಿಶೀಲಿಸಲು ಪ್ರತ್ಯೇಕ ಅಧ್ಯಯನ ಅಗತ್ಯವಾಗುತ್ತದೆ. ಇದು ದಿಕ್ಸೂಚಿ ಮಾತ್ರ.

## ಭಾಗವತ ಕವಿಗಳ ಜೀವನ ಸಂದೇಶ

"ಇದು ಮುರಾರಿಯ ಲೀಲೆಗೋಸುಗ ಉದಿಸಿದ ಜಗ"[52] ಎಂದು ಕುಮಾರವ್ಯಾಸನು ಭಾಗವತ ಧರ್ಮದ ಪ್ರಧಾನತತ್ತ್ವ ವನ್ನು ಸೂತ್ರೀಕರಿಸಿದ್ದಾನೆ. ಇಂತಹ ಸಿದ್ಧಾಂತ ಮನುಷ್ಯನ ಬದುಕನ್ನು ಜಡವಾಗಿಯೂ ನಿಷ್ಕ್ರಿಯವಾಗಿಯೂ ಮಾಡಿತೆ? ಜೀವನೋತ್ಸಾಹವನ್ನು ಕುಗ್ಗಿಸಿತೆ? ಭಾಗವತ ಕವಿಗಳ ಕೃತಿ ಗಳನ್ನು ಪರಿಶೀಲಿಸಿದರೆ ಈ ಸಂದೇಹಕ್ಕೆ ಎಡೆ ದೊರೆಯುವುದಿಲ್ಲ. ಕುಮಾರವ್ಯಾಸ ಭಾರತದ ಪಾತ್ರಗಳನ್ನು ನೆನಪಿಸಿಕೊಂಡರೇ ಸಾಕು, ಮೈ ರೋಮಾಂಚನವಾಗುತ್ತದೆ. ಬಾಲಕ ಅಭಿಮನ್ಯು ವಿನಿಂದ ತೊಡಗಿ ವೃದ್ಧಪಿತಾಮಹ ಭೀಷ್ಮರವರೆಗೆ ತುಂಬಿದ ಜೀವನೋತ್ಸಾಹ, ಕರ್ತವ್ಯಶ್ರದ್ಧೆ ಕಾಣುತ್ತದೆಯೇ ಹೊರತು ಸೋತ, ಸತ್ತ ಸಪ್ಪೆ ಪಾತ್ರಗಳಾಗಿ ಅವು ತೋರುವುದಿಲ್ಲ. ಬದುಕಿನ ಹಲವು ಕ್ಷಣಗಳಲ್ಲಿ ಮನಸ್ಸು ಕುಗ್ಗಿದಾಗಲೂ 'ಕ್ಷುದ್ರಂ ಹೃದಯ ದೌರ್ಬಲ್ಯಂ, ತ್ಯಕ್ತ್ವೋತ್ತಿಷ್ಠ ಪರಂತಪ'[53] ಎಂಬ ಜೀವನೋಲ್ಲಾಸದ ಸಂದೇಶವೇ ತೋರಿಬರುತ್ತದೆ. ಜಗತ್ತು

ಮುರಾರಿಯ ಲೀಲೆ ಎಂಬುದು ನಿಜ. ಆದರೆ ಮಾನವ ಸಾಹಸದ ವಿಸ್ತಾರ ವೈವಿಧ್ಯಗಳೂ ಇಲ್ಲಿ ಹೋಳಿಯಾಡುತ್ತವೆ. ಛಲದಂಕ ಮಲ್ಲನಾದ ದುರ್ಯೋಧನನಿಂದ ರಣಹೇಡಿಯಾದ ಉತ್ತರಕುಮಾರ ನವರೆಗೂ ಮಹಾಭಾರತದ ಪಾತ್ರ ಪ್ರಪಂಚ ವೈವಿಧ್ಯಪೂರ್ಣ. ಕೃಷ್ಣನ ನೆರಳಿನಲ್ಲಿಯೇ ಬಾಳಿದರೂ ಅವನನ್ನು ಅರಿಯದವರು, ಅರಿತು ಮರೆತವರು, ಮರೆತು ಮಲೆತವರು, ಕೊಬ್ಬಿ ನಿರ್ನಾಮ ವಾದವರು ಎಲ್ಲರೂ ಅಲ್ಲಿದ್ದಾರೆ. ಕೆಲವರ ಅಹಂಕಾರ ಭಂಗಕ್ಕೆ ಅವನ ಕಟಾಕ್ಷ ವಿಕ್ಷೇಪಸಾಕು-ಮತ್ತೆ ಕೆಲವರಿಗೆ ಅವನ ಚಾಟಿಯ ಪೆಟ್ಟೇ ಬೇಕು. ಅದಕ್ಕಿಂತ ತೀಕ್ಷ್ಣವಾದ ಮಾತಿನ ಮೊನೆ ಬೇಕು. ಹಲವರ ಹೃದಯ ಮಧ್ಯವಾಸಿ ಅವನು. ಹಲವರು ಕೂಗಿ ಕರೆದು ಕೈಯೆತ್ತಿ ಆಕ್ರಂದಿಸಿ 'ಕೃಷ್ಣಾ ಕರುಣಿಸು' ಎಂದು ಬೇಡುತ್ತಾರೆ. ದುರ್ಯೋಧನನಂತಹವರಿಗೆ 'ಕೃಷ್ಣನ ಕೆಣಕಿ ದಲ್ಲದೆ ವಹಿಲದಲಿ ಕೈವಲ್ಯವಿಲ್ಲ'[54] ಎಂಬಂತಹ ಕೆಚ್ಚು. ಆದರೆ ಹಾಗೆ ಸೆಣಸಿದವರೂ ಕೃಷ್ಣನಿಗೆ ಪ್ರಿಯರೇ ಆಗುತ್ತಾರೆ. ಧರಾಂಗನೆಯ ನೊಸಲ ತಿಲಕವಾಗುತ್ತಾರೆ. ಇಂತಹ ವೈವಿಧ್ಯದ ರಾಗದ್ವೇಷ ಸ್ನೇಹ–ವಾತ್ಸಲ್ಯ–ಭಕ್ತಿ · ಭೀತಿಗಳ ರೋಚಕ ಪ್ರಪಂಚವನ್ನು ಭಾಗವತ ಕವಿ ಸೃಜಿಸುತ್ತಾನೆಯೇ ವಿನಃ ಸತ್ವ ಹೀನ, ಜೋಬದ್ರ ಪಾತ್ರಪ್ರಪಂಚವನ್ನಲ್ಲ. ಮುಖ್ಯವಾದ ಮಾತೇನು? ಸಕಲ ಜೀವರಾಸಿಯೂ ಆತನ ವಾತ್ಸಲ್ಯದ ನೆರಳಿ ನಲ್ಲಿವೆ. ಇದು ಬದುಕಿಗೆ ಒಂದು ಬಗೆಯ ನೆಮ್ಮದಿಯನ್ನೂ ನಿರ್ಭೀತಿಯನ್ನೂ ಒದಗಿಸುವ ಸೂತ್ರ–ನಿಷ್ಕ್ರಿಯತೆಯ ಸಂದೇಶವಲ್ಲ. ನಡೆದಾಡುವ ನಾರಾಯಣನೂ ಒಂದು ಗಳಿಗೆ ಸುಮ್ಮನೆ ಕುಳಿತವನಲ್ಲವಲ್ಲ! ತಮ್ಮೆಲ್ಲರ ನಡುವೆ ನಡೆದಾಡು ವವನು, ಸ್ನೇಹಿತನಂತೆ ನುಡಿಸುವನು, ನಡೆಸುವನು, ತಿದ್ದುವನು,

ತೀಡುವನು, ತಿವಿಯುವನು. ಐವರ ಕೈಗಳನು ಸೆಗಹಿ ತನ್ನ ಕೈಯಲ್ಲಿಟ್ಟ ಕುಂತಿಯ ವಾತ್ಸಲ್ಯಕ್ಕೆ ಅವನು ಕರಗಿಯೇ ಹೋದನು. ಇಲ್ಲದ ವಾವೆಗಳನ್ನು ನೆನಪಿಸಿ ಅವನ ರಕ್ಷಣೆಯನ್ನು ಕೋರಿದ ಆಕೆಗೆ ಪಾಂಡವರು ನನ್ನ ಜೀವದ ಜೀವ, ಪ್ರಾಣದ ಪ್ರಾಣ ಎಂಬ ಭರವಸೆ ನೀಡಿದನು. ಭಕುತಿಯ ಭಾವರಸದಲ್ಲಿ ರೋಮಾಂಚಿತಳಾಗಿ ತನ್ನಿಂದ ಸೋದರ ವಾತ್ಸಲ್ಯವನ್ನೇ ಬಯಸಿದ ದ್ರೌಪದಿಯನ್ನು ಬದುಕಿನ ಉದ್ದಕ್ಕೂ ಹಾಗೆಯೇ ನಡೆಸಿಕೊಂಡನು. ಬಂಧುಗಳಾದ ಪಾಂಡವರ ವೈರಿನಾಶ, ವೈರನಾಶಕ್ಕೆ ತನ್ನನ್ನೇ ಪಣವಾಗಿಟ್ಟನು. ಕರ್ಣನ ಸ್ವಾಮಿಭಕ್ತಿಯನ್ನು ಕಂಡು ಮನವಾರೆ ಉಬ್ಬಿದನು. ಅವನಿಗೆ ರಾಜ್ಯಲೋಭವನ್ನು ತೋರಲು ಹೋಗಿ ಸೋತು "ಮನದೊಳಗೆ ನಾಚಿದನು." ಪ್ರೀತಿಯ ತಂಗಿ ದೂರ್ವಾಸಭಯದಿಂದ ತತ್ತರಿಸುತ್ತಿದ್ದರೆ, ಸಂತೈಸಿ ಅವಳ ಮೈ ತಡವಿದನು. 'ನಾವು ಹಸಿದೈತಂದೊಡೆ ಈ ಪರಿ ದೂರು ದೂರುವರೆ?[55] ಎಂದು ಅವಳೊಡನೆ ಪರಿಹಾಸ್ಯ ಮಾಡಿದನು. ಗಾಂಧಾರಿ ಪುತ್ರ ಶೋಕವನ್ನು ತಾಳಲಾರದೆ ತನಗಿತ್ತ ಶಾಪವನ್ನು ನಗುನಗುತ್ತಲೇ ತಲೆಬಾಗಿ ಸ್ವೀಕರಿಸಿದನು. ಆ ಮುದುಕಿಯನ್ನು ರಣರಂಗದ ಮಧ್ಯದಲ್ಲಿ ಕೈಹಿಡಿದು ನಡೆಸುತ್ತಾ, ಅವಳ ಕಾಲಿಗೆ ಬಳ್ಳಿಯಂತೆ ಸುತ್ತಿಕೊಂಡ ನರಗಳ ತೊಡಕನ್ನು ಕುಳಿತು ಬಿಡಿಸಿದನು. ಅರ್ಜುನನನ್ನು ಸಖನಂತೆ ತಿದ್ದಿದನು, ಅವನ ಮೌಢ್ಯವನ್ನು ಬಾರಿ ಬಾರಿಗೆ ಜರೆದನು. "ನರನ ಕಲಿಮಾಡಿ"[56] ಮೆರೆಸಿದನು. ಯುದ್ಧರಂಗದಲ್ಲಿಯಾದರೂ ಅವನ ಕೈಗೆ, ಕಣ್ಣಿಗೆ, ಮನಸ್ಸಿಗೆ ಒಂದು ಕ್ಷಣ ಬಿಡುವುಂಟೆ? ಒಂದು ಕೈಯಲ್ಲಿ ಕುದುರೆಗಳ ಲಗಾಮು, ಮತ್ತೊಂದರಲ್ಲಿ ಚಾಟಿ, ಸುತ್ತ ನಡೆವ ಸಂಗತಿಗಳ ಬಗ್ಗೆ

ಹದ್ದಿನ ಕಣ್ಣು. ಮನದಲ್ಲಿ ಚಿಂತನ ಮಾತಿನಲ್ಲಿ ಜೇನು, ಮುಖದಲ್ಲಿ ಮಂದಹಾಸ. ಒಂದು ಕ್ಷಣ ಬಿಡುವು ದೊರೆತರೆ ಸಾಕು. ಚಾಟಿಯನ್ನು ತಲೆಗೆ ಸಿಕ್ಕಿಸಿ, ಲಗಾಮನ್ನು ಹಲ್ಲಿಗೆ ಸಿಕ್ಕಿಸಿ, ಎರಡೂ ಕೈಗಳಿಂದ ಕುದುರೆಯ ಮೈ ಕೆರೆಯಬೇಕು.[57] ರಾತ್ರಿಯಲ್ಲಿ ವೀರಾಧಿವೀರರು ಸೋತು ಪಾಳೆಯದಲ್ಲಿ ಒರಗಿದಾಗ, ಈತ ಕುದುರೆಗಳನ್ನು ರಥದಿಂದ ಬಿಚ್ಚುತ್ತಾನೆ. ಯಮುನೆಯ ತಡಿಗೆ ಕರೆದೊಯ್ಯುತ್ತಾನೆ. ಬೊಗಸೆ ಬೊಗಸೆ ನೀರು ತುಂಬಿ ಅವುಗಳ ಮೈ ತೊಳೆಯುತ್ತಾನೆ. ಪೀತಾಂಬರದಲ್ಲಿ ಬೇಯಿಸಿದ ಹುರುಳಿ ತುಂಬಿ, ಮಂಡಿಯೂರಿ ಕುಳಿತು ತಿನ್ನಿಸುತ್ತಾನೆ. ಇಂತಹ ಬೆಚ್ಚರದ–ಚೆಚ್ಚರದ ಕರ್ಮಯೋಗಿ ಭಾರತದ ನಾಯಕ. ಆವನ ಅಧ್ಯಕ್ಷತೆಯಲ್ಲಿ ನಡೆದ ನರನಾಟಕದಲ್ಲಿ ನಿಷ್ಕ್ರಿಯತೆ–ಜಡತೆಯ ನೆರಳೂ ಇಣುಕದಲ್ಲವೆ? ಭಾರತದ ಪಾತ್ರಗಳು ಹೋರಾಡುತ್ತ, ಸಹಿಸುತ್ತ, ನಗು ನಗುತ್ತ, ಕಂಬನಿ ಸುರಿಸುತ್ತಲೇ ಬದುಕಿದ–ಬದುಕನ್ನು ಪ್ರೀತಿಸಿದ ತುಂಬು ಪಾತ್ರಗಳು. ರಕ್ತ–ಮಾಂಸಮಯವಾದ ಸಮೃದ್ಧ ಪಾತ್ರಗಳು. ಬರಿಯ ನೆರಳುಗಳಲ್ಲ. ಜೈಮಿನಿ ಭಾರತದ ಹಂಸಧ್ವಜ, ಮಯೂರಧ್ವಜ, ಸುಧನ್ವ, ಸುರಥ, ಬಭ್ರುವಾಹನರಿಗೂ ಈ ಮಾತು ಅನ್ವಯಿಸುತ್ತದೆ.

ಹಾಗಾದರೆ ಇದು ಮುರಾರಿಯ ಲೀಲೆಗೋಸುಗ ಉದಿಸಿದ ಜಗ ಎಂಬ ತತ್ವ ಕಲಿಸಿದ ಪಾಠವೇನು? ಸೃಷ್ಟಿಸ್ಥಿತಿಗಳ ಪರಮ ರಹಸ್ಯವನ್ನೂ, ಮಾನವನ ಗುರಿ–ಪರಿಮಿತಿಗಳನ್ನು ಮನಸ್ಸಿಗೆ ದೃಢ ಪಡಿಸುವುದು. ಕೊಬ್ಬುವ ಅಹಂಕಾರಕ್ಕೆ ಕಡಿವಾಣವಾಗುವುದು. ಎದ್ದವರೂ ಬಿದ್ದವರೂ, ನಿಚ್ಚಳ ಗುರಿಯಿಂದ ಜಾರದೆ, ಪರಿಶುದ್ಧ ಪ್ರಾಮಾಣಿಕತೆಯಿಂದ ಬದುಕಿದರೆ ಮುರಾರಿಯ ಕರುಣೆ ಅವರಿಗೂ ದೊರಕುತ್ತದೆ ಎಂಬ ತುಂಬು ಭರವಸೆಯನ್ನು ನೀಡುವುದು.

ಭೀಷ್ಮರ ಪ್ರತಾಪವೇನು ಕಡಿಮೆ ಭಾರತಯುದ್ಧದಲ್ಲಿ? "ದೈವಬಲವವರಲ್ಲಿ ನೀವೇ ದೈವಹೀನರು"[58] ಎಂದು ಕೌರವನನ್ನು ಎಚ್ಚರಿಸಿಯೇ ಅವರು ಯುದ್ಧವನ್ನು ಕೈಕೊಂಡರು. ಹತ್ತು ಸಹಸ್ರ ವೀರರನ್ನು ದಿಗ್ಬಲಿ ಕೊಡುತ್ತೇನೆ. ದಿನದಿನಕ್ಕೂ ಹರಿಯ ಕೈಯಲ್ಲಿ ಚಕ್ರವನ್ನು ಹಿಡಿಯಿಸುತ್ತೇನೆ; ಕಿರೀಟಿಯ ರಥವನ್ನು ಹಿಂದಟ್ಟುತ್ತೇನೆ....ಎಂದು ಮುಂತಾಗಿ ವೀರಪ್ರತಿಜ್ಞೆಗೈದು, ಅದನ್ನು ಪೂರ್ಣವಾಗಿ ನೆರವೇರಿಸಿದ ಅದಟು ಈ ವೀರ ವೃದ್ಧರದು. ಕೃಷ್ಣನನ್ನೇ ಅವರು ಕೆರಳಿಸಿದರೂ "ಗಾಂಗೇಯ ಭಯಭಕ್ತಿಯಲಿ ಗೆಲಿದನು ವರ ಸುದರ್ಶನವ" ಎಂಬ ಮಾತು ಗಮನಾರ್ಹ. ಅರಿಬಲನಡುಗುವಂತೆ ದ್ರೋಣರು ಕಾದಿದುದು ನಿಜ. ಆದರೆ, "ಪರಮ ಗರುಡೋದ್ಗಾರ ಮಣಿಯನು ಗರಳ ಸುಡುವುದೆ? ಕೃಷ್ಣರಾಯನ ಕರುಣ ಕವಚವನೊಡೆಯಲಾಪವೆ ಎಮ್ಮ ಕೈದುಗಳು"[59] ಎಂಬ ವಿವೇಕವೂ ಅವರಿಗುಂಟು. ಅಷ್ಟೇಕೆ, ಇಂತಹ ವಿವೇಕ ಛಲದಂಕಮಲ್ಲ, ಅಭಿಮಾನಧನ, ದುರ್ಯೋಧನನಿಗೂ ಬಂದುದುಂಟು. ನನ್ನನ್ನು ಸೇನಾಪತಿಯಾಗಿ ಮಾಡಿಬಿಡು. ಪಾಂಡವರ ತಲೆಯನ್ನು ತಂದೊಪ್ಪಿಸಿಬಿಡುತ್ತೇನೆ ಎಂದು ಗಳಹುತ್ತಿದ್ದ ಅಶ್ವತ್ಥಾಮನಿಗೆ ದುರ್ಯೋಧನನ ಉತ್ತರ ಇದು. ಆಯಿತು ಮಾಡುವುದನ್ನು ಮಾಡು ನಿನ್ನ ಚಪಲಕ್ಕೆ. ಆದರೆ ಚೆನ್ನಾಗಿ ತಿಳಿ ಅಶ್ವತ್ಥಾಮ; "ನಿನ್ನ ಭುಜಬಲ ವಾಗುರಿಯ ವೇಢೆಯಲಿ ಬೀಳದು ಕೃಷ್ಣ ಬುದ್ಧಿ ಮೃಗ."[60] ಇಂತಹ ದೈವದ ನಿಶ್ಚಿತ ಸಂಕಲ್ಪವನ್ನೂ ಮಾನವ ಸಾಹಸದ ಪರಿಮಿತಿಯನ್ನೂ ತೋರಿಸಿಕೊಡುವುದು ಮಾತ್ರ ಭಾಗವತ ಕವಿಯ ಉದ್ದೇಶ. ಪರಿಮಿತ ಬಲದ ಮಾನವನ ಉದ್ಧಟತನ, ಅಹಂಭಾವಗಳಿಗೆ ಕವಿ ಹಾಕುವ ಕಡಿವಾಣ ಇಲ್ಲಿ ಗಮನಾರ್ಹ.

ಅಲ್ಲದೆ ಮತ್ತೊಂದು ಮುಖ್ಯ ಸಂಗತಿಯೂ ಚಿಂತನಾರ್ಹ. ದೈವ ಮಾನುಷರೂಪಿಯಾಗಿ ಅವತರಿಸಿ ಭಕ್ತರ ಮೊರೆಗೆ ಓಗೊಡುವುದು ನಿಜ. ಆದರೆ ಅವರಿಗೆ ತನ್ನ ಮಾಯೆಯಿಂದ ಧಿಡೀರ್ ಮೋಕ್ಷವನ್ನೇನೂ ಕರುಣಿಸುವುದಿಲ್ಲ. ಭಕ್ತರನ್ನು ಸಂತೈಸುವುದು ನಿಜ. "ಪಿರಿದಾಯಾಸವನು ಅನುಭವಿಸಿದೆ ತಂಗಿ"[61] ಎಂದು ವಾತ್ಸಲ್ಯದಿಂದ ನುಡಿದು ಶಿರದ ಧೂಳನ್ನು ಕೊಡಹುವುದೂ ಸರಿಯೇ. ಆದರೆ ತನ್ನ ಮಾಯಾಕುಂಚದಿಂದ ಇಡಿಯ ಯುದ್ಧವನ್ನೇ ಇಲ್ಲವಾಗಿಸುವುದಿಲ್ಲ. ವೈಕುಂಠದಿಂದ ಪಲ್ಲಕ್ಕಿಯನ್ನು ಕಳುಹಿಸಿ ಭಕ್ತರನ್ನು ನೇರವಾಗಿ ಕರೆದೊಯ್ಯುವುದಿಲ್ಲ. ಜೀವ ಕರ್ಮಲೋಕದಲ್ಲಿ ಹಣ್ಣಾಗಬೇಕು. ತನ್ನ ತನ್ನ ರಾಗ ದ್ವೇಷಗಳೇ ಜೀವವನ್ನು ಕೃಶಗೊಳಿಸುತ್ತಾ ಕಣ್ಣು ತೆರೆಸಬೇಕು. ಭಗವತ್ ಕೃಪೆಗೆ ಯಾಚಿಸುವಂತಾಗಬೇಕು. ಅಪಕ್ವಫಲವನ್ನೂ ಬಿಸಿಲು ಹಣ್ಣನ್ನೂ ದೈವ ಬಯಸುವುದಿಲ್ಲ. ಲೋಕದ ದುಃಖ ಸಂಕಟಗಳನ್ನು ಕಂಡು, ಅನುಭವಿಸಿ, ಮಾಗಿದ ಜೀವವನ್ನು ಅವನು ಪ್ರೀತಿಯಿಂದ ಕೈಗೆತ್ತಿಕೊಳ್ಳುತ್ತಾನೆ. ಹಾಗೆ ಆಗುವವರೆಗೂ ಸಂಕಷ್ಟ ಸರೋವರದಲ್ಲಿ, ರಾಗದ್ವೇಷಗಳ ಪ್ರವಾಹದಲ್ಲಿ ಜೀವ ಮುಳುಗಿ ಏಳಬೇಕು. ದೈವ ದುಃಖದಲ್ಲಿ ಕೈಹಿಡಿಯುತ್ತದೆ. ಕಂಬನಿ ಒರಸುತ್ತದೆ. ಆದರೆ ಮಾಗುತ್ತಲೇ ಇರುವಾಗ ಅಲ್ಲಿಯೇ ಮುಕ್ತಿಗೆ ಒಯ್ಯುವುದಿಲ್ಲ. ಈ ಆತ್ಮೋದ್ಧಾರ ವಿಧಾನದಿಂದಲೇ ಭಾಗವತ ಕವಿಯ ಪಾತ್ರಗಳು ಕ್ರಮ ಕ್ರಮವಾಗಿ ತಮ್ಮ ಆತ್ಮದ ಕಾಳಿಕೆಯನ್ನು ಕಳೆದುಕೊಂಡು, ಉದ್ಧಾರದ ಹಾದಿಯನ್ನು ಹಿಡಿಯುತ್ತವೆ. ಕೃಷ್ಣನ ಕೃಪೆಗೆ ಪಾತ್ರವಾಗುತ್ತವೆ. ಕರ್ಣನ ಬದುಕು ಊರ್ಧ್ವಗತಿಗೆ ಸಂದುದು ಸುಯೋಧನನ ಮಿತ್ರತ್ವದಿಂದಲ್ಲ–ದೈವವೇ ಒಡ್ಡಿದ ಪ್ರಲೋಭನೆಯನ್ನು ಗೆದ್ದ ಕ್ಷಣದಲ್ಲಿ.

ತ್ತಿಲ್ಲಿಯವರೆಗೂ ಕರ್ಣನು ದುಷ್ಟ ಚತುಷ್ಟಯದಲ್ಲಿಯೇ ಒಬ್ಬನೆನಿಸಿದ್ದ.

ದ್ರೌಪದಿಯ ಪಾತ್ರವೂ ಭಾಗವತ ಕವಿಯ ಜೀವನದರ್ಶನದ ಉತ್ತಮ-ಉಜ್ವಲ ಉದಾಹರಣೆ. ಮಹಾಭಾರತದ ನಾಯಕರು ಯಾರು ಎಂಬ ಬಗ್ಗೆ ಸಂಶಯವಿರಬಹುದೇನೋ. ಆದರೆ ನಾಯಕಿಯಂತೂ ನಿಸ್ಸಂದೇಹವಾಗಿ ದ್ರೌಪದಿಯೇ. "ರಣ ಚಂಡಿಯು ಬೆಂಕಿಯ ಮಗಳು, ಹೆಣ್ಣಿನ ರೂಪದಿ ಬರಸಿಡಿಲವಳು".[62] ಅವಳ ಕೋಪದ ಕಿಡಿಯಲ್ಲಿ ಹೊತ್ತಿ ಉರಿದು ಹೋಯಿತು ಕೌರವ ವಂಶ. ಅಗ್ನಿಪುತ್ರಿಯೂ ವಾಯುಪುತ್ರನೂ ಸಮಜೋಡಿಯಾಗಿ ಕೌರವಾನ್ವಯವನ್ನು ಸುಟ್ಟುರುಹಿದ ಭೀಷಣ ಕತೆಯೇ ಮಹಾಭಾರತ. ಈ ಕೃಷ್ಣೆಯ ಕಬರಿಯನ್ನು ತುಡುಕಿದುದೇ ದುಶ್ಶ್ಯಾಸನನ ಅವಸಾನಕ್ಕೆ ನಾಂದಿ. ಆ ಮಾನಿನಿಗೆ ತೊಡೆ ತೋರಿದುದೇ ಊರುಭಂಗದ ಮೊದಲ ಶ್ರುತಿ. ಇಂತಹ ಗಂಡುಪಾತ್ರವಾದ ದ್ರೌಪದಿಯ ನಾಯಕಿಯ ಪಟ್ಟವನ್ನು ಶಂಕಿಸುವ ಎಂಟೆದೆ ಯಾರಿಗೆ? ಆದರೆ ನಮ್ಮ ಭಾಗವತ ಕವಿ ಕುಮಾರವ್ಯಾಸ ಈ ಪಾತ್ರವನ್ನು ಬೆಳೆಸುವ ಬಗೆಯನ್ನು ನೋಡಿ.

ರಾಜಸೂಯಯಾಗ ಪ್ರಸಂಗ. ಮಯನಿರ್ಮಿತ ಸಭಾಭವನದಲ್ಲಿ ಮರುಳಾಗಿ ದುರ್ಯೋಧನ ತತ್ತರಿಸುತ್ತಿದ್ದಾನೆ. ನೆಲವನ್ನು ನೀರೆಂದು-ನೀರನ್ನು ನೆಲವೆಂದು ಭ್ರಮಿಸುತ್ತಿದ್ದಾನೆ. ಹಸ್ತಿನಾವತಿಯ ಸಾಮ್ರಾಟನನ್ನು ಕಂಡು ಗಹಗಹಿಸಿ ನಗುವುದೇ ಪಾಂಚಾಲ ಪುತ್ರಿ! ಎಂತಹ ದಾಷ್ಟ್ಯ೯? "ನಗೆಗೆ ನಗೆ ಹೊಗೆಯಾಯ್ತು, ನಗೆಯೊಳಗೆ ಅಡ್ಡ ಬಿದ್ದಳು ಪಾಂಡುಪುತ್ರರ ಜೊಡ್ಡಿ"[63] ಎಂದು ತನ್ನ ಉದ್ವೇಗವನ್ನು ಅಪ್ಪನೊಡನೆ ದೊರೆ ದುರ್ಯೋಧನ ತೋಡಿಕೊಳ್ಳುವುದು ಸಹಜವೇ. ಈ ಪರಿಹಾಸದ ಕೀಟಲೆ ಅವನ

ವೀರವೈರವೃಕ್ಷಕ್ಕೆ ಸಮೃದ್ಧವಾದ ಗೊಬ್ಬರವಾಯ್ತು. ಮುಂದೆ ಈ ಮಾನಿನಿ ಎಂತಹ ಪರಿಭವಕ್ಕೆ ಒಳಗಾದಳು! ತುಂಬಿದ ರಾಜ ಸಭೆಯಲ್ಲಿ ರಜಸ್ವಲೆ ಮೈಯೊಡ್ಡಿ ನಿಂತಿದ್ದಾಳೆ. ಸೀರೆಯನ್ನು ಸುಲಿಯುವ ರಕ್ಕಸ ದುಶ್ಶಾಸನ—ಅಬ್ಬರಿಸಿ ನಗುವ ಕರ್ಣ—ತೊಡೆತಟ್ಟುವ ದುಷ್ಟದೊರೆ. ದ್ರೌಪದಿಯ ಸ್ಥಿತಿಯೇನು? ಹೊಲಬುತಪ್ಪಿದ ಹುಲ್ಲೆ—ತಾಯಿ ಬಿಸುಟ ಶಿಶು. ಕಾಗೆಗಳ ಬಳಗದ ಕೋಗಿಲೆಯ ಮರಿ. "ಪತಿಗಳೆನ್ನನು ಮಾರಿ ಧರ್ಮ ಸ್ಥಿತಿಯ ಕೊಂಡರು. ಕೃಷ್ಣಾ ಕೈಗಾಯಬೇಕು"[64] ಎಂಬ ಆಕ್ರಂದನ. ಮುಂದೆ ಹನ್ನೆರಡು ವರುಷಗಳ ದೀರ್ಘ ವನವಾಸ. ಕಡುನೊಂದ ನಾರಿ, ವಿರಾಟನ ಅಂತಃಪುರದ ಸೈರಂಧ್ರಿಯೂ ಆದಳು. ಅಲ್ಲಿ ಕಾಮುಕ ಕೀಚಕನ ಕ್ರೂರ ಕೋಟಲೆ. ಕೀಚಕನ ಬಳಿಗೆ ಒತ್ತಾಯದಿಂದ ಮಧುಪಾತ್ರೆಯನ್ನು ಹಿಡಿದು ಹೊರಟಾಗ ಅವಳು ಚಿಂತಿಸಿದಳಂತೆ. "ಜನನವೇ ಪಾಂಚಾಲರಾಯನರಮನೆ, ಮನೋವಲ್ಲಭರಾರೆನೆ ಗೀರ್ವಾಣರಿಗಿಂ ಮಿಗಿಲು. ಎನಗೆ ಬಂದ ಡರಿದುದು, ವಿರಾಟನ ವನಿತೆಯರ ಮುಡಿಯಕಟ್ಟುವ ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ!"[65] ಅವಳ ಮುಖದ ಮೇಲೆ ವ್ಯಥೆಯ ನಗೆ. ರಕ್ಷಣೆಯನ್ನು ಬಯಸಿ ವಲಲನ ಬಳಿಗೆ ಬಂದರೆ ಆ ಭೂಪ ತನ್ನ ಪಾಕಪರಿಕರಗಳ ನಡುವೆ ಚಚ್ಚೌಕ ವಾಗಿ ನಿದ್ರಿಸುತ್ತಿದ್ದಾನೆ. "ಆರಲರಿದನೋ ಭೀಮನೀ ಸೂವಾರ ವಿದ್ಯೆಯನು ಭಾಪುವಿಧಿ ಎಂದು ನಾರಿ ನಸುನಗುತ ಒಳಹೊಕ್ಕ ಳಂತೆ."[66] ಈ ನಗೆ ಎಂತಹ ನಗೆ? ರಾಜಸೂಯದ ಅಬ್ಬರದ ಗಹಗಹಿಕೆಯೆ? ಬದುಕಿನ ಸಂಕಷ್ಟಗಳಿಗೆ ಒಡ್ಡಿಕೊಂಡು ಮಾಗಿದ ಮಂದಹಾಸವೆ? ಆದರೆ ಕೃಷ್ಣ ಕೃಪಾಕಟಾಕ್ಷ ಅದು ಮತ್ತಷ್ಟು ಮಾಗುವುದನ್ನು ಬಯಸುತ್ತಿದೆ!

ಘೋರ ಸಂಗ್ರಾಮ ಕೈಗಟ್ಟಿತು. ಭಾರತ ಯುದ್ಧದ ಅಬ್ಬರದಲ್ಲಿ ರಕ್ತದ ಹೊಳೆಯಲ್ಲಿ ಮಾಂಸದ ಮೆದೆಯಲ್ಲಿ ಮಾನಿನಿ ಸೊಕ್ಕಿದಳು. ದುಶ್ಶಾಸನನ ವಧೆಯಲ್ಲಿ ಸಂತೃಪ್ತನಾದ ವೀರ ಭೀಮನ ಅಬ್ಬರ ಶೃಂಗಾರದಲ್ಲಿ ಮತ್ತೆ ವೀರನಗೆ ನಕ್ಕಳು. ಅವಳ ಬೆನ್ನಹಿಂದೆ ಕೃಷ್ಣನೂ ನಕ್ಕನು! ಕಾಲ ಹೊರಳಿತು, ಸೇಡಿಗೆ ಸೇಡು ಮರಿಯಿಟ್ಟಿತು. ಅಶ್ವತ್ಥಾಮನ ಅವಿವೇಕದ ಆವಾಂತರಕ್ಕೆ ತನ್ನ ಮುದ್ದಿನ ಮಕ್ಕಳು ಬಲಿ. ಗಾಂಧಾರಿಯಂತೆಯೇ ದ್ರೌಪದಿಗೂ ದುಸ್ಸಹ ಪುತ್ರಶೋಕ. ಕುಪಿತರಾದ ಭೀಮಾರ್ಜುನರು ಅಶ್ವತ್ಥಾಮನನ್ನು ತರಿದುಹಾಕಲು ಧಾವಿಸಿದರು. ವೀರಪಾಂಚಾಲಿ ಅವರ ಹಿಂದೆಯೇ ಓಡಿದಳು. ಆಗ ಅವಳು ಆಡಿದುದೇನು? ಅವಳ ಸೇಡಿನ ಕಿಡಿ ಎಲ್ಲಡಗಿತು? ಮುಡಿಯನ್ನು ಸೋಂಕಿದ ತಪ್ಪಿಗೆ ದುಶ್ಶಾಸನನ ಮೇಲೆ ಕನ್ಪನೆ ಕೆರಳಿ ಕುದಿದು ಸೇಡಿಗೆ ದುಡುಕಿದ ದ್ರೌಪದಿ ಇವಳೇಯೆ ಎನಿಸಿಬಿಡುತ್ತದೆ. ಕುಮಾರವ್ಯಾಸನ ಈ ಮಾತು ಕೇಳಿದರೆ :

ಬಂದಳಾ ದ್ರೌಪದಿಯುಹಹ!
ಗುರುನಂದನನ ಕೊಲ ಬಾರದಕಟ
ಈ ನಂದನರ ಮಹಾವ್ಯಥೆ ಕೊಂದುಕೂಗದೆ ಕೃಪೆಯನು ?
ಅಬಲಾವೃಂದ ಸಮದುಃಖಿಗಳು ಸಾರು[67]

ಎಂದು ಭೀಮಾರ್ಜುನರನ್ನು ಅತ್ತ ತಳ್ಳಿದಳಂತೆ ದ್ರೌಪದಿ. ರಣಚಂಡಿ ಅದೆಷ್ಟು ಮಾಗಿದ್ದಾಳೆ ಈಗ—ಕರುಳಿನ ಕುಡಿಗಳನ್ನು ಚಿವುಟಿದವನಲ್ಲಿ ಕರುಣೆ—ಗಾಂಧಾರಿಯೊಡನೆ ಶೋಕವನ್ನು ಹಂಚಿಕೊಳ್ಳುವ ಔದಾರ್ಯ, ಅಂತಃಕರಣ, ಬದುಕು, ಈ ಜೀವವನ್ನು ಹೇಗೆ ಹಣ್ಣುಮಾಡಿದೆ! ರಾಗದ್ವೇಷಗಳ ಕಸರು ಕಳೆದ ಪರಿಪಕ್ವ ಫಲ ಇದು. ಇಂಥ ಜೀವವನ್ನೇ ಕೃಷ್ಣ ಕೃಪೆಯಿಂದ ಕೈಗೆತ್ತಿ

ಕೊಳ್ಳುವುದು. ಕೇವಲ ತನ್ನ ಮಾಯಾದಂಡದಿಂದ ಬದುಕಿನ ಕಷ್ಟಗಳನ್ನು ಇಲ್ಲವಾಗಿಸುವುದರಿಂದ ಅಲ್ಲ.

ಈ ವಿಸ್ತಾರ ವಿಮರ್ಶೆಯಿಂದ ಭಾಗವತ ಕವಿಯ ಜೀವನ ದೃಷ್ಟಿಯ ಸ್ಥೂಲ ಪರಿಚಯವಾಗಬಹುದು. ಜೀವವನ್ನು ಬದುಕಿಗೆ ಅಣಿಮಾಡುವುದು ; ಕೃಷ್ಣನ ಕೃಪೆಗೆ ಪಾತ್ರವಾಗುವಂತೆ ತಿದ್ದಿ ಸಂಸ್ಕರಿಸುವುದು ; ದೈವದ ಕೃಪಾವಿಲಾಸವನ್ನು ಕಂಡು ಹಿಗ್ಗುವ, ಸ್ವಕರ್ಮವನ್ನು ಸಂತಸ ಉತ್ಸಾಹದಿಂದ ಭಗವತ್ಪೂಜೆಯೆಂದು ಕೈಗೊಳ್ಳುವ, ಮನೋಧರ್ಮವನ್ನು ಬಲಿಯಿಸುವುದು ; ಬದುಕಿನಿಂದ ಪಲಾಯನ ಮಾಡದೆ, ಜಗತ್ತನ್ನು ಮಿಥ್ಯೆಯೆಂದು ನಿರಾಕರಿಸದೆ, ಇಲ್ಲಿಯೇ ದೈವೀ ಕರುಣೆಯನ್ನು ಅನುಭವಿಸುವಂತೆ ಸಜ್ಜುಗೊಳಿಸುವುದು; ಬದುಕನ್ನು ಅದರ ಕಷ್ಟ ಹಾಗೂ ಸಮ್ಮೋದಗಳೊಡನೆ ಇಡಿಯಾಗಿ ಸ್ವೀಕರಿಸುವುದು ; ತನ್ನ ಪರಿಮಿತಿಯನ್ನು ಅರಿತು ವಿನಯವನ್ನು ತಾಳುವುದು ; ದೈವದ ಅಸೀಮ ಶಕ್ತಿ–ವಾತ್ಸಲ್ಯಗಳನ್ನು ಅರಿತು ಅನುಭವಿಸುವುದು ; ಮೂಲತತ್ತ್ವದ ವಿವಿಧ, ದೈವಸ್ವರೂಪಗಳನ್ನು ಅಸಹನೆ, ತಾತ್ಸಾರ, ಪರಿಹಾಸಗಳಿಲ್ಲದೆ ಸಮಾನ ಗೌರವ–ಭಕ್ತಿಗಳಿಂದ ಒಲಿದು ಪೂಜಿಸುವುದು; ಇಂತಹ ಶುಭದೃಷ್ಟಿಯನ್ನು ಭಾಗವತ ಕವಿ ಹಿರಿಯ ಆದರ್ಶವಾಗಿ ನಮ್ಮೆದುರು ಬೆಳಗುತ್ತಿದ್ದಾನೆ.

"ಭವವಿದು ಭಗವಲ್ಲೀಲೆಯೆನ್ನಿಸುವ
ಕವಿಮಾನಸ ಚಿಂತಾಮಣಿಗೆ
ತವದುಳಿವಾನಂದವನುತ್ಕರಿಸುವ
ನವಧ್ಯಾನದುದಧಿಗೆ ಮಣಿಗೆ

(ರಸಚಿಂತನ)–ಪುತಿನ

## ಸಂದರ್ಭ ಸೂಚಿ


1 ಗೀತಾ ರಹಸ್ಯ—ಬಾಲಗಂಗಾಧರ ತಿಲಕ್, ಪುಟ. 426–27

2 ಮಹಾಭಾರತ—ಶಾಂತಿಪರ್ವ, 347–81

3 ವಿವರಗಳಿಗೆ ಗೀತಾರಹಸ್ಯ ಅಧ್ಯಾಯ (ಪ್ರಕರಣ 11) ನೋಡಬಹುದು

4 ಶಾಂತಿಪರ್ವ—341–20, 26, ಹಾಗೂ 342/129

5 ಕರ್ಣಾಟಕ ಭಾರತ ಕಥಾಮಂಜರಿ—ಕುಮಾರವ್ಯಾಸ, ಕರ್ಣಪರ್ವ 27–18

6 ಶ್ರೀಭಾಷ್ಯ—ಮಂಗಳಶ್ಲೋಕ, ಶ್ರೀ ರಾಮಾನುಜರು

7 ಬಸವೇಶ್ವರ ವಚನ, ಪು. 27, ರಾ. ಬ. ಪಿ. ಜಿ. ಹಳಕಟ್ಟಿ

8 ಶ್ರೀಪಾದರಾಜರು

9 ವೀರೇಶ ಚರಿತೆ 1–9—ರಾಘವಾಂಕ

9 (ಅ) ಕ.ಸಾ.ಚರಿತ್ರೆ, ರಂ.ಶ್ರೀ. ಮುಗಳಿ, ಪು. 203

9 (ಆ) ಚಂಪೂ ಕವಿಗಳು ಬೆಂಗಳೂರು ವಿ.ವಿ.—ಜನಸಾಮಾನ್ಯನಿಗೆ ಸಾಹಿತ್ಯ ಪುಟ. 181

10–10(ಅ) ಜಗನ್ನಾಥವಿಜಯ—ರುದ್ರಭಟ್ಟ, ಆ. 1—ಪದ್ಯ. 22

11 ಕೃಷ್ಣಕರ್ಣಾಮೃತಂ—(ಸಂ) ಶ್ರೀನಿವಾಸ, ಶ್ಲೋಕ 24

12 ಜಗನ್ನಾಥ ವಿಜಯ—ಆ. 3, ಪ. 105

13 ಅದೇ—ಆ. 18, ಪ. 66

14 ಅದೇ. ಪ. 67

15 ಗಿರಿಜಾಕಲ್ಯಾಣ—ಹರಿಹರ

16 ವೀರೇಶ ಚರಿತೆ 1–9—ರಾಘವಾಂಕ

17 ನೇಮಿನಾಥಪುರಾಣ—ನೇಮಿಚಂದ್ರ

18 ಕನ್ನಡಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ

19 ಕುಮಾರವ್ಯಾಸ—ಕುವೆಂಪು

20–20(ಅ) ಕರ್ಣಾಟಕ ಭಾರತ ಕಥಾಮಂಜರಿ—ಆದಿಪರ್ವ ಸಂ. 1, ಪ. 7

20 (ಆ) ಅದೇ. ಪದ್ಯ. 14

21 ಅದೇ. ಸಭಾಪರ್ವ, ಸಂ. 9, ಪ. 19

22 ಅದೇ. 23

23 ಅದೇ 24
24 ಅದೇ. ಕರ್ಣಪರ್ವ, ಸಂ. 27, ಪ. 10
25 (ಅ) ಅದೇ. ಪ. 9
26 ಅದೇ. ಉದ್ಯೋಗ ಪರ್ವ, ಸಂ. 10. ಪ. 1
27 ಅದೇ.
28 ಅದೇ. ಅರಣ್ಯಪರ್ವ, ಸಂ. 6. ಪ. 50
29 ಅದೇ. ಸಂಧಿ 16, ಪ. 42
30 ಅದೇ. ಪ. 48
31 ಅದೇ. ದ್ರೋಣಪರ್ವ, ಸಂ. 8, ಪ. 11
32 ಅದೇ. ಪ. 36
33 ಅದೇ. ಪ. 37
34 ಜೈಮಿನಿ ಭಾರತ—ಲಕ್ಷ್ಮೀಶ, ಸಂ. 2, ಪ. 62–63
35 ಅದೇ. ಸಂ. 34, ಪ. 12
36 ಅದೇ. ಪ. 13
37 ಅದೇ. ಸಂ. 14, ಪ. 23
38 ಅದೇ. ಸಂ. 34. ಪ. 43
39 ಅದೇ. ಸಂ. 31. ಪ. 70
40 ಅದೇ. ಪ. 69
41 ಅದೇ. ಪ. 70
42 ಪ್ರಭುಲಿಂಗಲೀಲೆ—ಚಾಮರಸ, ಸಂ. 2, ಪ. 251
43 ಭರತೇಶ ವೈಭವ—ರತ್ನಾಕರವರ್ಣಿ, ಸಂ. 2, ಪ. 60
44 ತಮೋಭೀತಿ—ಗಣೇಶದರ್ಶನ, ಪು. 29, ಪು.ತಿ.ನ
45 ಗಣೇಶ ದರ್ಶನ—ಪು.ತಿ.ನ., ಪು. 2
46 ಅದೇ. ಪು. 10
47 ನಂದಿಬೆಟ್ಟದ ಮೇಲುಗಡೆ—ಪು.ತಿ.ನ., ಪು. 49
48 ಹೇಮಾವತಿ—ಇರುಳಮೆರಗು, ಪು. 77, ಪು.ತಿ.ನ.
49 ಸುಂದರ ದಿನಮುಖ—ಹೃದಯವಿಹಾರಿ, ಪು. 6, ಪು.ತಿ.ನ.
50 ನೇರಿಳೆ—ಹೃದಯವಿಹಾರಿ, ಪು. 30, ಪು.ತಿ.ನ.
51 ರಸಚಿಂತನ (ಅಪ್ರಕಟಿತ) ಪು.ತಿ.ನ.
52 ಕರ್ಣಾಟಕ ಭಾರತ ಕಥಾಮಂಜರಿ—ಕುಮಾರವ್ಯಾಸ, ಸಂ. 8

53 ಭಗವದ್ಗೀತೆ—ಅಧ್ಯಾಯ 2, ಶ್ಲೋಕ 3
54 ಅದೇ. ಅರಣ್ಯಪರ್ವ, ಸಂ. 16, ಪ. 38
55 ಅದೇ. ಕರ್ಣಪರ್ವ, ಸಂ. 26, ಪ. 44
56 ನೋಡಿ. ಕೃಷ್ಣಕರ್ಣಾಮೃತ ಶ್ಲೋಕ—(ನಖನಿಯಮಿತ ಕಂಡೂನ್ ...) ಲೀಲಾಶುಕ
57 ಕುಮಾರವ್ಯಾಸ ಭಾರತ—ಭೀಷ್ಮಪರ್ವ, ಸಂ. 1, ಪ. 23
58 ಅದೇ. ದ್ರೋಣಪರ್ವ, ಸಂ. 4, ಪ. 8
59 ಅದೇ ಗದಾಪರ್ವ, ಸಂ. 8. ,ಪ. 62
60 ಅದೇ. ಅರಣ್ಯಪರ್ವ, ಸಂ. 16, ಪ. 37
61 ಕುಮಾರವ್ಯಾಸ, ಕುವೆಂಪು
62 ಕುಮಾರವ್ಯಾಸ ಭಾರತ—ಸಭಾಪರ್ವ, ಸಂ 12, ಪ. 43
63 ಅದೇ. ಸಂ. 14, ಪ. 108
64 ಅದೇ. ವಿರಾಟಪರ್ವ, ಸಂ. 3, ಪ. 60
65 ಅದೇ. ಸಂ. 3, ಪ. 38
66 ಅದೇ. ಗದಾಪರ್ವ, ಸಂ. 10, ಪ. 26

# ಗ್ರಂಥಋಣ


ಕನ್ನಡ ಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ (ಪ್ರ) ಉಷಾ ಸಾಹಿತ್ಯಮಾಲ ಮೈಸೂರು.

ಗೀತಾ ರಹಸ್ಯ—ಬಾಲಗಂಗಾಧರ ತಿಲಕ್ (ಅನು) ರಂಗನಾಥ ದಿವಾಕರ

ಮಹಾಭಾರತ (ಶಾಂತಿಪರ್ವ).

ಕರ್ಣಾಟಕ ಭಾರತ ಕಥಾಮಂಜರಿ—ಕುಮಾರವ್ಯಾಸ (ಪ್ರ) ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ.

ಕರ್ಣಾಟಕದ ಧರ್ಮಗಳು—ಡಾ. ಎ. ಸಿ. ನಂದೀಮಠ (ಪ್ರ) ಕನ್ನಡ ಸಾಹಿತ ಪರಿಷತ್ತು, ಬೆಂಗಳೂರು.

ಜಗನ್ನಾಥವಿಜಯ—ರುದ್ರಭಟ್ಟ (ಪ್ರ) ಕನ್ನಡ ಸಾಹಿತ್ಯ ಪರಿಷತ್ತು, ಸಾಹಿತ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ.

ಜೈಮಿನಿ ಭಾರತ—ಲಕ್ಷ್ಮೀಶ (ಪ್ರ) ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರ್ಕಾರ.

ಶ್ರೀ ಪು.ತಿ.ನ. ಅವರ ಗಣೇಶದರ್ಶನ ಇತ್ಯಾದಿ ಕಾವ್ಯ ಕೃತಿಗಳು.



ಕೆ.ಸಂ. ೨೪೩೮೧—ಎಂ.ಯು.ಪಿ.ಎಂ.—೫೦೦೦—೧೬–೬–೮೩

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯಿ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣ ಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ